ಸಂಪುಟ ೧೬ ಸಂಚಿಕೆ ೨ ಜೂನ್ ೧೯೯೬

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕ್ ನೌಕರರಲ್ಲಿ ಸಾಹಿತ್ಯಾಸಕ್ತಿ

**ಅ. ಬಾಲಕೃಷ್ಣ ಶೆಟ್ಟಿ ಪೊಳಲಿ**
ಸಿಂಡಿಕೇಟ್ ಬ್ಯಾಂಕ್, ಮಣಿಪಾಲ

**ಶಾರೀರಿಕ ಅಗತ್ಯಗಳನ್ನು ಪೂರೈಸಲು ಹಣ ಸಂಪಾದನೆಗಾಗಿ ಉದ್ಯೋಗ ಮಾಡಬಹುದು. ಆದರೆ ಮನಸ್ಸಿನ ಹಸಿವು ಬಾಯಾರಿಕೆಗಳನ್ನು ನಿವಾರಿಸಲು ಸಾಹಿತ್ಯ ಕಲೆಗಳು ಸಹಾಯ ಮಾಡುತ್ತವೆ, ಬ್ಯಾಂಕಿಗೂ ಗ್ರಾಹಕರಿಗೂ ಲಾಭ ದೊರಕಿಸಿ ಕೊಡುತ್ತವೆ.**

ನಮ್ಮ ದೇಶದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಒಂದು ನಂಬುಗೆ ಪ್ರಚಲಿತವಾಗಿದೆ. ಅದೆಂದರೆ, ಲಕ್ಷ್ಮಿ ಮತ್ತು ಸರಸ್ವತಿಯರು ಅತ್ತೆ-ಸೊಸೆಯಂದಿರು. ಲಕ್ಷ್ಮಿ ಇರುವಲ್ಲಿ ಸರಸ್ವತಿಗೆ ಸ್ಥಾನವಿಲ್ಲ. ಸರಸ್ವತಿಯ ವರಪ್ರಸಾದ ಪಡೆದವರಿಗೆ ಲಕ್ಷ್ಮಿಯ ಕರುಣೆಯಿಲ್ಲ. ಹೀಗಿರುವಾಗ ಲಕ್ಷ್ಮಿಯ ಪ್ರತೀಕವಾಗಿರುವ ಹಣದಲ್ಲೇ ವ್ಯವಹಾರ ಮಾಡುವ ಬ್ಯಾಂಕಿಂಗ್ ಸಂಸ್ಥೆಗಳಲ್ಲಿ ಸಾಹಿತ್ಯಕ್ಕೇನು ಸ್ಥಾನ ಎಂಬ ಪ್ರಶ್ನೆಯನ್ನು ಯಾರಾದರೂ ಮಾಡಿದರೆ ಅದು ಸಹಜ.

ಬ್ಯಾಂಕಿಂಗ್ ಎಂದರೆ ಉಳ್ಳವರಿಂದ ಸಂಗ್ರಹಿಸಿ ಅವಶ್ಯವುಳ್ಳವರಿಗೆ (ಉತ್ಪಾದಕತೆಯ ಚಟುವಟಿಕೆಗಳಿಗಾಗಿ) ಒದಗಿಸುವ ವ್ಯವಹಾರ ಎಂದು ಬಹಳ ಕಾಲದಿಂದ ನಂಬುಗೆಯಿತ್ತು. ಈ ವ್ಯವಹಾರದಿಂದ ಒದಗುವ ಲಾಭವೇ ಬ್ಯಾಂಕಿಂಗ್ ಚಟುವಟಿಕೆಗಳು ಹೆಚ್ಚಲು ಕಾರಣವಾಯಿತು. ಸಂಖ್ಯೆಗಳನ್ನು ಕೂಡಿಸಲು, ಕಳೆಯಲು, ಗುಣಿಸಲು ಮತ್ತು ಭಾಗಿಸಲು ತಿಳಿದರೆ ಧಾರಾಳ ಸಾಕಾಗುತ್ತದೆ. ಸಾಮಾನ್ಯ ಭಾಷಾಜ್ಞಾನ ಬ್ಯಾಂಕ್ ಕೆಲಸಕ್ಕೆ ಸಾಕು. ದಿನನಿತ್ಯದ ವ್ಯವಹಾರದಲ್ಲಿ ಇದಕ್ಕಿಂತ ಹೆಚ್ಚು ಅವಶ್ಯವಿಲ್ಲ ಎನ್ನುವ ದಿನಗಳಿದ್ದುವು. ಬ್ಯಾಂಕ್ ಆಡಳಿತ ನಡೆಸುವವರಲ್ಲಿ ಹೆಚ್ಚಿನವರು ಅರಸ(ಅ+ರಸ)ರೇ ಆಗಿದ್ದರು. ಅಂಥವರಲ್ಲಿ ಸಾಹಿತ್ಯ, ಕಲೆಗಳೆಂದರೆ ಏನೋ ಹೇಳುತ್ತಾರಲ್ಲಾ...ಕೋಣನ ಮುಂದೆ ಕಿನ್ನರಿ ಎಂದು ಹಾಗೆ ಆಗುತ್ತಿತ್ತು. ಯಾರಾದರೂ ಇಂಥ "ಅನುತ್ಪಾದಕ" ವಿಷಯಗಳಲ್ಲಿ ಆಸಕ್ತಿ ತೋರಿಸಿದರೆ ಅವರನ್ನು ಕೆಲಸಗಳ್ಳ ಎಂದೂ ಭಾವಿಸುತ್ತಿದ್ದರು.

## ಕಲೆಯ ವಾಣಿಜ್ಯರೂಪ

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸ್ಪರ್ಧೆ ಪ್ರಾರಂಭವಾದಾಗ ಹೆಚ್ಚು ಗ್ರಾಹಕರನ್ನು ಆಕರ್ಷಿಸುವ ದೃಷ್ಟಿಯಿಂದ ಹೊಸ ಹೊಸ ಯೋಜನೆಗಳನ್ನು ರೂಪಿಸುವುದು ಅವಶ್ಯವಾಯಿತು. ನೂರು ರೂಪಾಯಿಗೆ ವರ್ಷಕ್ಕೆ ಮೂರು ರೂಪಾಯಿ ಬಡ್ಡಿ ಸಿಗುತ್ತದೆ ಎಂಬ ಶಂಖ ಊದಿದರೆ ಜನ ಆ ಕಡೆ ಬರುವುದಿಲ್ಲ. ಬದಲಾಗಿ ಠೇವಣಿ ಯೋಜನೆಯ ಹೆಸರಿನಲ್ಲಿ ಒಂದು ಆಕರ್ಷಣೆ ಬೇಕು ಎಂದು ಯೋಜನೆ ರೂಪಿಸುವವರು ಮನಗಂಡರು. ಜಾಹೀರಾತು ಬರೆಸುವುದೂ ಅವಶ್ಯ ಎನ್ನಿಸಿತು. ಪತ್ರಿಕೆಗಳನ್ನೋ, ಕರಪತ್ರವನ್ನೋ ಎತ್ತಿ ನೋಡುವವರ ಕಣ್ಣು ಜಾಹೀರಾತಿನತ್ತ ಹರಿಯಬೇಕಾದರೆ ಅಲ್ಲೊಂದು ಚಿತ್ರ ಬೇಕಾಯಿತು. ಇದರಿಂದಾಗಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸಾಹಿತ್ಯ ಮತ್ತು ಕಲೆಗೆ ಒಂದಿಷ್ಟು ಬೆಲೆ ಬಂತು.

ಒಂದಿಷ್ಟು ಬೆಲೆ ಬಂತು. ಆದರೆ ಈ ಬೆಲೆ ಬ್ಯಾಂಕ್‌ಗಳಲ್ಲಿ ಉದ್ಯೋಗಿಗಳಾಗಿದ್ದು ಸಾಹಿತ್ಯ ಮತ್ತು ಕಲೆಗಳಲ್ಲಿ ದುಡಿಯುವವರಿಗೆ ಬಂತೆಂದು ಹೇಳುವಂತಿಲ್ಲ. ಜಾಹೀರಾತು ಸಂಸ್ಥೆಗಳಿವೆ. ಅವರಿಗೆ ಒಂದಿಷ್ಟು ಹಣ ಎಸೆದರೆ ಅವರೇ ಬೇಕಾದಂತೆ ಮಾಡಿ ಕೊಡುತ್ತಾರೆ ಎಂಬ ಮನೋಭಾವ ಇನ್ನೂ ಪೂರ್ಣ ಬದಲಾಗಿಲ್ಲ. ಎಂದರೆ ಬ್ಯಾಂಕಿಂಗ್ ಸಾಹಿತ್ಯ ಎಂದರೆ ಜಾಹೀರಾತಿಗೆ, ಕರಪತ್ರ ತಯಾರಿಸಲಿಕ್ಕೆ ಬೇಕಾಗುವಷ್ಟು ಇದ್ದರೆ ಸಾಕು ಎಂಬ ತೃಪ್ತಿ ಹೆಚ್ಚಿನ ಆಡಳಿತಗಾರರಲ್ಲಿ ಇದೆ.

ಒಂದು ಕರಪತ್ರ ಸಿದ್ಧಗೊಳಿಸಲು ಸಾಹಿತ್ಯದಲ್ಲಿ ಆಸಕ್ತಿಯುಳ್ಳವನಿಗೆ ಹೇಳಿದರೆ ಅವನು ಏನು ಮಾಡುತ್ತಾನೆ? ತನ್ನ ಪ್ರತಿಭೆಯನ್ನುಪಯೋಗಿಸಿ ಸಾಹಿತ್ಯದ ಭಾಷೆಯನ್ನು ಬಳಸಿ ಒಂದು ಕರಪತ್ರ ಸಿದ್ಧಮಾಡಬಹುದು. 'ಆಹಾ ! ಎಂಥಾ ಕರಪತ್ರ ! ಎಂಥಾ ಭಾಷೆ ! ಇದು ಯಾರಿಗಾದರೂ ಅರ್ಥವಾದೀತೇ ?' ಎಂಬ ಟೀಕೆ ಕೂಡಲೇ ಸಿದ್ಧ. ಅದರ ಬದಲು ಇದನ್ನು ಹೀಗೆ ಬದಲಾಯಿಸಿರಿ. ಅದರಿಂದ ಜನಸಾಮಾನ್ಯರಿಗೂ ಅರ್ಥವಾಗುತ್ತದೆ ಎಂದು ಹೇಳುವ ಮನೋಭಾವ ನಮ್ಮಲ್ಲಿ ಎಷ್ಟು ಮಂದಿ ಹಿರಿಯ ಅಧಿಕಾರಿಗಳಿಗಿದೆ ! ಪ್ರಶಂಸೆ ಬಿಡಿ ! ಹರಿತವಾದ ಚೂರಿಯಂತೆ ಟೀಕಾಸ್ತ್ರ ನಿಮ್ಮನ್ನು ಚೈತನ್ಯಹೀನರನ್ನಾಗಿ ಮಾಡುತ್ತದೆ.

## ಸಮಾಧಾನದ ಸಂಗತಿ

ಬ್ಯಾಂಕಿನಲ್ಲಿ ಸಾಹಿತ್ಯ ಕಲೆಗಳೆಲ್ಲ ಅವಶ್ಯವಿಲ್ಲ. ಅದೆಲ್ಲ ಅವರವರ ವೈಯಕ್ತಿಕ ಆಸಕ್ತಿ. ಅದನ್ನು ಅವರವರು ಮಾಡಿಕೊಂಡರೆ ನಮ್ಮ ಅಡ್ಡಿಯಿಲ್ಲ. ಬ್ಯಾಂಕಿನ ದಿನನಿತ್ಯದ ಕೆಲಸಕ್ಕೆ ತೊಂದರೆಯಾಗದಿದ್ದರೆ

ಆಯಿತು ಎಂಬ ಉದಾರವಾದಿಗಳೂ ನಿಮಗೆ ಸಿಗುತ್ತಾರೆ. ತಮ್ಮ ಉದ್ಯೋಗಿಗಳು ಸಾಹಿತಿಗಳಾದರೆ, ಕಲಾವಿದರಾದರೆ ಅದರ ಶ್ರೇಯಸ್ಸು ಅವರು ದುಡಿಯುವ ಸಂಸ್ಥೆಗೂ ಇದೆ ಎಂದು ಕೆಲವಾದರೂ ಬ್ಯಾಂಕ್‌ಗಳು, ಬ್ಯಾಂಕ್‌ಗಳು ಎಂದರೆ ಅವುಗಳ ಆಡಳಿತದ ಮೇಲಿನ ಸ್ತರಗಳಲ್ಲಿರುವ ಅಧಿಕಾರಿಗಳು, ಇತ್ತೀಚೆಗೆ ಮನಗಾಣುತ್ತಿರುವುದು ಸ್ವಲ್ಪ ಸಮಾಧಾನದ ಸಂಗತಿ. ಅವರಲ್ಲಿ ಕೆಲವರು ಸ್ವಯಂ ಸಾಹಿತಿಗಳೂ ಆಗಿದ್ದಾರೆ. ಅಲ್ಲದೆ ಸಾಹಿತ್ಯದ ಪೋಷಕರೂ ಆಗಿರುತ್ತಾರೆ ಎಂಬುದಂತೂ ಸ್ವಲ್ಪ ಹೆಚ್ಚು ನೆಮ್ಮದಿ ತರುವ ವಿಷಯ.

ಬ್ಯಾಂಕಿನಲ್ಲಿ ಸಾಹಿತ್ಯಾಸಕ್ತರು ಉದ್ಯೋಗಿಗಳಾದಾಗ ಸಂಸ್ಥೆಗೆ ಆಗುವ ಲಾಭ ಏನು ಎಂಬುದನ್ನು ನಾವು ಯೋಚಿಸಬೇಕಾಗಿದೆ. ಲಾಭವು ನೇರವಾಗಿ ಹಣದ ರೂಪದಲ್ಲೇ ಇರಬೇಕಾಗಿಲ್ಲ. ಆದರೆ ಅವರು ತಮ್ಮ ದಿನನಿತ್ಯದ ಕೆಲಸದಲ್ಲಿ ತೋರಿಸುವ ಶ್ರದ್ಧೆ, ಜಾಣ್ಮೆ, ಕೌಶಲಗಳು ಇತರರಿಗಿಂತ ಮೇಲ್ಮಟ್ಟದ್ದಾಗಿರಬೇಕು. ಇದರಿಂದ ಗ್ರಾಹಕರನ್ನು ಮೆಚ್ಚಿಸುವುದು ಅವರಿಗೆ ಸುಲಭಸಾಧ್ಯವಾಗುತ್ತದೆ.

ಸಾಹಿತ್ಯದ ಅಧ್ಯಯನ ಮಾಡಿ ಅದನ್ನು ಹೃದ್ಗತಮಾಡಿಕೊಂಡವನು ಯಾವ ಕೆಲಸವನ್ನೇ ಮಾಡಲಿ ಅದರಲ್ಲಿ ಶ್ರೇಷ್ಠನಾಗಲು ಸಹಜವಾಗಿ ಸಾಧ್ಯವಿದೆ. ಇತರರ ಮನಸ್ಸನ್ನರಿತು, ಸಕಾಲದಲ್ಲಿ ಸಾಂತ್ವನ ಹೇಳಲು ಸಾಹಿತ್ಯದ ಅಭ್ಯಾಸಿಗೆ ಪ್ರಯತ್ನ ಬೇಕಾಗಿಲ್ಲ. ಯಾವನೇ ಸಾಹಿತಿಯಿರಲಿ ಅವನು ತನಗೆ ಮಾತ್ರವಲ್ಲ, ಇತರರಿಗೂ ಹಿತ ಬಯಸುವವನಾಗಿರಬೇಕು. ಅಂಥವನು, ತಾನು ಕೈಗೊಂಡ ಉದ್ಯೋಗವು ಇತರರ ನೆರವಿಗೆ ಒದಗಲು ದೊರಕಿದ ಸದವಕಾಶ ಎಂದು ಭಾವಿಸುತ್ತಾನೆ.

ಅತ್ಯಂತ ಕಡಿಮೆ ಹೃದಯ ಬಳಸುವ ವೃತ್ತಿ ಹಣಕಾಸಿನ ವ್ಯವಹಾರ ಎನ್ನುತ್ತಾರೆ. ಲೆಕ್ಕಾಚಾರಕ್ಕೆ ದುಃಖವಿಲ್ಲ ಎನ್ನುವುದು ಇನ್ನೊಂದು ಮಾತು. ಆದರೆ ಹಣಕಾಸಿನ ವ್ಯವಹಾರ ಮಾಡುತ್ತಿರುವಾಗಲೇ ಸಹೃದಯನಾಗಿ ಇತರರ ಆವಶ್ಯಕತೆಯಲ್ಲಿ ನೆರವಾಗುವುದು ಬುದ್ಧಿಜೀವಿಗಳಿಗೆ ಹೇಳಿಸಿದ್ದಲ್ಲ. ಅವರು ಪ್ರತಿಯೊಂದು ಹೆಜ್ಜೆಯನ್ನೂ ಲೆಕ್ಕಾಚಾರ ಮಾಡಿ ಇಡುತ್ತಾರೆ. ಆದರೆ ಭಾವಜೀವಿಯೂ ಆಗಿರುವವನಿಗೆ ಆ ಲೆಕ್ಕಾಚಾರಕ್ಕಿಂತ ಬೇರೆಯೇ ಆದ ಇನ್ನೊಂದು ಮನಸ್ಸೂ ಇದೆ ; ಇದೆ ಮಾತ್ರವಲ್ಲ, ನಮ್ಮ ಜೀವನದಲ್ಲಿ ಅದು ಅತಿ ಅವಶ್ಯ ಎಂದು ತಿಳಿದುಕೊಳ್ಳುತ್ತಾನೆ. ಹಾಗೆಂದು ಪೂರ್ಣ ಭಾವಜೀವಿಯಾಗಿ ಬುದ್ಧಿಯನ್ನೂ ಲೆಕ್ಕಾಚಾರವನ್ನೂ ಅವಗಣಿಸಿದರೆ ಅಂಥವರು ತಾವೂ ನಾಶವಾಗುತ್ತಾರೆ, ಸಂಸ್ಥೆಯನ್ನೂ ನಾಶಗೊಳಿಸುತ್ತಾರೆ.

## ಕಂಪ್ಯೂಟರ್ ಯುಗದಲ್ಲಿ

ಇಪ್ಪತ್ತೊಂದನೆಯ ಶತಮಾನಕ್ಕೆ ನಾವು ದಾಪುಗಾಲಿಡುತ್ತಿದ್ದೇವೆ. ಉದಾರೀಕರಣವಂತೂ ನಿತ್ಯದ ಮಾತಾಗಿದೆ. ಆಧುನಿಕ ಸಂವಹನಶಾಸ್ತ್ರ, ತಾಂತ್ರಿಕ ವಿಜ್ಞಾನಗಳಿಂದಾಗಿ ಸಾಹಿತ್ಯ ನಮಗೆ ಬ್ಯಾಂಕಿನಲ್ಲಿ ಅವಶ್ಯವೇ ಇಲ್ಲ. ಎರಡು ಬೆರಳು ಇದ್ದರೆ ಕುರುಡರೂ ಗಣಕಯಂತ್ರಗಳ ಸಹಾಯದಿಂದ ಎಂಥ ವ್ಯವಹಾರ ಮಾಡಲೂ ಸಾಧ್ಯವಾದ ದಿನಗಳಿವು—ಹಾಗಾಗಿ ಇಲ್ಲಿ ಸಾಹಿತ್ಯಕ್ಕೇನು ಕೆಲಸ ಎಂಬ ಪ್ರಶ್ನೆ ಏಳುತ್ತದೆ.

ನಿಜ ಎಂದರೆ, ಎಲ್ಲಿ ಮಾನವತೆಗೆ ಕೆಲಸವೇ ಇಲ್ಲವೋ ಅಲ್ಲಿ ಸಾಹಿತ್ಯ ಕಲೆ ಇತ್ಯಾದಿ ಸುಂದರ ವಿಚಾರಗಳು ಪ್ರವೇಶಿಸಿ ಯಂತ್ರ ಸದೃಶವಾದ ಬಾಳನ್ನು ಹಸನುಗೊಳಿಸಬೇಕಾಗಿದೆ. ಇತ್ತೀಚೆಗೆ ಕೆಲವು ವರ್ಷಗಳಿಂದ ಭಾರತೀಯ ಬ್ಯಾಂಕ್‌ಗಳಲ್ಲಿ ಗಣಕೀಕರಣ ವಿಸ್ತಾರವಾಗುತ್ತಿದೆ. ಅದರೊಂದಿಗೆ ಮನುಷ್ಯ-ಮನುಷ್ಯರೊಡನೆ ನಡೆಯುತ್ತಿರುವ ಸಂವಾದ ಕಡಮೆಯಾಗುತ್ತಿದೆ. ಮನುಷ್ಯನೇ ಲೆಕ್ಕ ಮಾಡುವಾಗ ತಪ್ಪಾದರೆ ಅವನು ಅದನ್ನು ಒಪ್ಪಿ ಸರಿ ಮಾಡುತ್ತಿದ್ದ. ಈಗ ಹಾಗಾಗುತ್ತಿಲ್ಲ. ಗಣಕಯಂತ್ರ ತಪ್ಪು ಮಾಡಲು ಸಾಧ್ಯವೇ ಇಲ್ಲ ಎಂಬ ಬುದ್ಧಿದಾರಿದ್ರ್ಯ ನಮಗೆ ಬಂದಿದೆ. ಬ್ಯಾಂಕಿನಲ್ಲಿ ಕುಳಿತು ತಲೆ ತಗ್ಗಿಸಿ ಗಣಕಯಂತ್ರದೊಡನೆ ಮಾತನಾಡುವವರಿಗೆ ಇದಿರು ವ್ಯವಹಾರ ಮಾಡುತ್ತಿರುವ ಗ್ರಾಹಕನೂ ಒಂದು ಸಂಖ್ಯೆಯಾಗಿ ಪರಿಚಿತ. ಗ್ರಾಹಕರೆಂದರೆ ನಮ್ಮ ಆವರಣದಲ್ಲಿ ಅತಿಗಣ್ಯವ್ಯಕ್ತಿ ಎಂಬ ಭಾವ ಮಾಯವಾಗಿ, ಅವನಿಗೆ ಬೇಕಾಗಿ ಬರುತ್ತಾನೆ ಎಂಬ ತಾತ್ಸಾರ ಉಂಟಾಗಿದೆ. ಐದು ರೂಪಾಯಿ ಠೇವಣಿ ಇಟ್ಟು ಉಳಿತಾಯ ಖಾತೆ ತೆರೆದವನನ್ನು ಮಹಾರಾಜರೆಂದು ಕರೆಯುತ್ತಿದ್ದ ದಿನಗಳೆಲ್ಲಿ ? ಲಕ್ಷಗಟ್ಟಲೆ ರೂಪಾಯಿ ಠೇವಣಿ ಅಥವಾ ಸಾಲ ಖಾತೆದಾರರನ್ನು ಮಾತ್ರ ಸೇವಿಸುವ ಇಂದಿನ ದಿನಗಳೆಲ್ಲಿ ?

ಬ್ಯಾಂಕ್‌ಗಳ ಸೇವಾಮಟ್ಟದಲ್ಲಿ ಇಳಿಮುಖವಾಗುತ್ತಿದೆಯೆಂಬ ದೂರು ಎಷ್ಟು ಹೆಚ್ಚಾಗಿದೆಯೆಂದರೆ ನಮಗೆ ದಿಗ್ಭ್ರಮೆಯೆನಿಸುತ್ತದೆ. ಇದರಲ್ಲಿ ಹೆಚ್ಚಿನ ದೂರುಗಳು ಸಿಬ್ಬಂದಿಯ ಅಲಕ್ಷ್ಯ, ನಿರ್ಲಕ್ಷ್ಯ, ದುರಾಗ್ರಹವನ್ನು ಎತ್ತಿ ಹೇಳುತ್ತವೆ. ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ, ಇಷ್ಟು ಸಂಬಳಕ್ಕೆ ಇಷ್ಟೇ ಕೆಲಸ ; ನಮ್ಮನ್ನು ಕೇಳಲು ಗ್ರಾಹಕರಿಗೇನು ಅಧಿಕಾರ ಎಂಬ ತಾತ್ಸಾರ—ಈ ಮನೋಭಾವಗಳು ಸಿಬ್ಬಂದಿಯವರಲ್ಲಿ ಹೆಚ್ಚುತ್ತಿದೆ ಎಂದು ಈ ದೂರುಗಳನ್ನು ವಿಶ್ಲೇಷಿಸಿದಾಗ ಕಂಡುಬರುತ್ತದೆ. ಸಿಬ್ಬಂದಿಗೆ ಎಷ್ಟೇ ಸೌಲಭ್ಯ ಹೆಚ್ಚಿಸಿದರೂ ಅಂಥ ಸೌಲಭ್ಯ ಪಡೆಯುವುದು ತಮ್ಮ ಹಕ್ಕು ಎಂಬ ದುರಾಗ್ರಹವೂ ಇದನ್ನು ಸೇರಿರುತ್ತದೆ.

## ಬೇಕು—ಆಸಕ್ತಿ

ಇದನ್ನೆಲ್ಲ ಕಂಡಾಗ, ನಮ್ಮ ಬ್ಯಾಂಕ್‌ಗಳಲ್ಲಿ ದುಡಿಯುವ ಪ್ರತಿಯೊಬ್ಬನಿಗೂ ಜೀವನದಲ್ಲಿರುವ ಇತರ ಆಸಕ್ತಿಗಳೇನು ? ಅವು ಹೇಗೆ ಬ್ಯಾಂಕಿಗೆ ಪೋಷಕ ! ಅದನ್ನು ಉತ್ತೇಜಿಸಲು ಎಂಥ ಕಾರ್ಯಕ್ರಮ ಅವಶ್ಯ ಎಂಬುದನ್ನು ತಿಳಿದುಕೊಳ್ಳುವ ಆಸಕ್ತಿ ಬೇಕು ಎನಿಸುತ್ತದೆ. ಸಮಾಜಕ್ಕೆ ಪ್ರಯೋಜನ ನೀಡಬಲ್ಲ, ವ್ಯಕ್ತಿಗೆ

[8ನೇ ಪುಟ ನೋಡಿ]

# ಸರಕಾರಿ ವಲಯದ ಬ್ಯಾಂಕುಗಳ ಸಾಧನೆ (1994-95)

**ಬಿ. ಎಸ್. ಚಂದ್ರಶೇಖರ**
ವ್ಯವಸ್ಥಾಪಕ, ಭಾರತೀಯ ಸ್ಟೇಟ್ ಬ್ಯಾಂಕ್, ಚಿತ್ರದುರ್ಗ

**ಆರ್ಥಿಕ ಉದಾರೀಕರಣದಿಂದಾಗಿ ಸರ್ಕಾರಿ ಬ್ಯಾಂಕುಗಳ ಮೇಲೂ ಪರಿವರ್ತನೆಯ ಗಾಳಿ ಬೀಸಿದೆ. ಅನೇಕ ಬ್ಯಾಂಕುಗಳು ಇದನ್ನು ಎದುರಿಸುವಲ್ಲಿ ಹಲವು ತೊಂದರೆಗಳನ್ನ ಎದುರಿಸುತ್ತಿವೆ. ಮೊದಲ ವರ್ಷಗಳಲ್ಲಿ ಬ್ಯಾಂಕುಗಳಿಗೆ ತೀರಾ ಇರಿಸುಮುರಿಸಾದದ್ದೂ ನಿಜ. ಈಗಿನ ಸ್ಥಿತಿ ಏನು ಎಂಬ ಕುತೂಹಲಕ್ಕೆ ಈ ಲೇಖನದಲ್ಲಿ ಉತ್ತರವಿದೆ.**

ಕಳೆದ ಕೆಲವು ವರ್ಷಗಳಲ್ಲಿ ಬ್ಯಾಂಕುಗಳ ಸಾಧನೆಯನ್ನು ಕುರಿತು ಸರಕಾರದ ಹಾಗೂ ಸಾರ್ವಜನಿಕರ ಕಳಕಳಿ ಹೆಚ್ಚಿರುವುದು ತಿಳಿದ ವಿಷಯ. ಮಿತಿಮೀರಿದ ಕರಡು ಸಾಲಗಳ ಹೊರೆಯಿಂದ ತತ್ತರಿಸುತ್ತಿದ್ದ ನಮ್ಮ ಸರಕಾರಿ ಕ್ಷೇತ್ರದ ಬ್ಯಾಂಕುಗಳ ಕಾರ್ಯನಿರ್ವಹಣೆಯ ಮೇಲೆ ಅಪಾರ ಒತ್ತಡ ಉಂಟಾಗಿತ್ತು. ಕರಡು ಸಾಲಗಳ ಪರಿಣಾಮವಾಗಿ ಆಂತರಿಕವಾಗಿ ದುರ್ಬಲವಾಗಿದ್ದರೂ 1991–92ರ ಸಾಲಿನವರೆಗೆ ಸರಕಾರಿ ಕ್ಷೇತ್ರದ ಬ್ಯಾಂಕುಗಳ ಆಸ್ತಿ ಹೊಣೆ ತಃಖ್ತೆಗಳಲ್ಲಿ ಲಾಭದ ಅಂಕಿಗಳು ಏಕಮುಖವಾಗಿಯೇ ಇದ್ದವು. ಕರಡು ಸಾಲಗಳನ್ನು ಕರಡೆಂದು ತೋರಿಸಿ ಅವಕ್ಕೆ ತಕ್ಕ ಉಪಬಂಧ* (provision) ಏರ್ಪಡಿಸದಿದ್ದುದೇ ಇದಕ್ಕೆ ಕಾರಣ.

1992ರಲ್ಲಿ ಜಾರಿಗೊಳಿಸಲಾದ ಆಸ್ತಿವರ್ಗೀಕರಣ ಮತ್ತು ಆದಾಯ ಗುರುತಿಸುವಿಕೆಯ ಮಾನದಂಡಗಳಿಂದ ಭಾರತೀಯ ಬ್ಯಾಂಕುಗಳ ಸ್ಥಿತಿಯ ಸ್ಪಷ್ಟ ಚಿತ್ರ ತೋರುವಂತಾಯಿತು. ಕರಡು ಸಾಲಗಳಿಗೆ ಸಮರ್ಪಕ ವ್ಯವಸ್ಥೆ ಮಾಡಲೇಬೇಕಾಗಿ ಬಂದುದರಿಂದ ಲಾಭದ ಅಂಕಿಗಳು ಕುಸಿದವು. ಹಲವು ಬ್ಯಾಂಕುಗಳು ಅಪಾರ ನಷ್ಟ ತೋರಿಸಿದವು. ಮೊದಲ ವರ್ಷಗಳಲ್ಲಿ ಬ್ಯಾಂಕುಗಳಿಗೆ ತೀರಾ ಇರಿಸುಮುರಿಸಾದದ್ದು ನಿಜ ; ಈಗಿನ ಪರಿಸ್ಥಿತಿ ಏನು ? ಎಂಬ ಕುತೂಹಲ ಸಹಜ.

ಸರಕಾರಿ ಕ್ಷೇತ್ರದ ಬ್ಯಾಂಕುಗಳು ತೋರಿಸಿದ ನಷ್ಟದತ್ತ ಸಮಾಜದ, ಸರಕಾರದ ಗಮನ ಸೆಳೆಯಲ್ಪಟ್ಟು ಬ್ಯಾಂಕುಗಳು ಕಟು-ಟೀಕೆಗೆ ಒಳಗಾಗುವಂತಾಯಿತು. ಲಾಭ ಮಾಡುವುದೇ ಬ್ಯಾಂಕುಗಳ ಉದ್ದೇಶವಲ್ಲವೆಂದು ಒಪ್ಪಿದವರೂ ಈ ನಷ್ಟವನ್ನು ಸಮರ್ಥಿಸಲಿಲ್ಲ. ಬ್ಯಾಂಕುಗಳ ಮೇಲೆ ನಡೆದ ಟೀಕಾ ಪ್ರಹಾರಗಳು ತೀರಾ ಅನುಚಿತವಾಗಿರಲಿಲ್ಲ ಎಂಬ ಮಾತನ್ನು ಒಪ್ಪಬಹುದಾದರೂ ಟೀಕೆ ಅತಿಯಾಯಿತೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಸರಕಾರಿ ವಲಯದ ಬ್ಯಾಂಕುಗಳಿಗೆ ಸಾಮಾಜಿಕ ಬ್ಯಾಂಕಿಂಗ್ ಮತ್ತು ಲಾಭಗಳಿಕೆ—ಇವೆರಡೂ ಅಂಶಗಳನ್ನೂ ಒಟ್ಟಿಗೆ ಸಾಧಿಸುವುದು ಸುಲಭವಾಗಿರಲಿಲ್ಲ. ಈ ಎರಡು ತಟ್ಟೆಗಳಿದ್ದ ಬ್ಯಾಂಕಿನ ತಕ್ಕಡಿ ಏರುಪೇರಾಗಿದ್ದು ನಿಜ. ಆದಾಯ ಗುರುತಿಸುವಿಕೆಯ ಮಾನದಂಡದಿಂದ ಈ ತಕ್ಕಡಿಯ ಸೂಚಿಯನ್ನು ಏರ್ಪಡಿಸಿದ್ದರಿಂದ ತಕ್ಕಡಿ ಏರುಪೇರಾದದ್ದು ಎಲ್ಲರ ಗಮನಕ್ಕೂ ಬರುವಂತಾಯ್ತು.

ಬ್ಯಾಂಕಿಂಗ್ ವ್ಯವಸ್ಥೆಗಳು ಸಂಕಟ ಎದುರಿಸುವುದು ಅಪರೂಪವೇನಲ್ಲ. ಅಭಿವೃದ್ಧಿ ಹೊಂದಿದ ದೇಶಗಳಲ್ಲೂ ವ್ಯಾಪಾರಚಕ್ರದಲ್ಲಿನ ಬದಲಾವಣೆಗಳಿಂದ ಬ್ಯಾಂಕಿಂಗ್ ವ್ಯವಸ್ಥೆಗಳ ಸಮತೋಲ ತಪ್ಪಿದ್ದುಂಟು. ಈಗ್ಗೆ ಮೂರು ನಾಲ್ಕು ವರ್ಷಗಳ ಮುಂಚೆ ಯೂರೋಪಿನ ಹಾಗೂ ಅಮೆರಿಕಾದ ಬ್ಯಾಂಕುಗಳು ಕಷ್ಟದಲ್ಲಿದ್ದುವು. ಅನೇಕ ಬ್ಯಾಂಕುಗಳು ನಷ್ಟ ಅನುಭವಿಸಿದುವು. ಇದೀಗ ಜಪಾನೀ ಬ್ಯಾಂಕುಗಳ ಸ್ಥಿತಿ ಕೆಟ್ಟಿರುವ ಹಾಗಿದೆ. ಜಪಾನ್ ದೇಶ ಎದುರಿಸುತ್ತಿರುವ ವ್ಯಾಪಾರ ಮುಗ್ಗಟ್ಟಿನ ಸಮಸ್ಯೆಯಿಂದ ಅಲ್ಲಿನ ಬ್ಯಾಂಕುಗಳ ಸುಮಾರು 300 ಬಿಲಿಯನ್ ಡಾಲರುಗಳಷ್ಟು ಸಾಲಗಳು ಕರಡಾಗಿದ್ದು ಇದರಿಂದ ಬ್ಯಾಂಕುಗಳ ಲಾಭ ಕುಸಿದಿದೆ ಎನ್ನಲಾಗಿದೆ. ಕಳೆದ ಕೆಲವು ವರ್ಷಗಳಿಂದ ಜಾರಿಗೆ ತರಲಾದ ಮಾರುಕಟ್ಟೆ ಸುಧಾರಣೆಗಳಿಗೆ ಹೊಂದಿಕೊಳ್ಳಲು ಮತ್ತೆ ಕೆಲವು ದೇಶಗಳಲ್ಲಿ ಬ್ಯಾಂಕುಗಳು ಶ್ರಮಿಸುತ್ತಿವೆ. ಅತಿಯಾದ ಸ್ಪರ್ಧೆ, ಬದಲಾದ ಅರ್ಥನೀತಿ, ಉದಾರೀಕರಣ ಇವುಗಳ ಹಿನ್ನೆಲೆಯಲ್ಲಿ ಭಾರತೀಯ ಬ್ಯಾಂಕುಗಳು ಹಲವು ಸಮಸ್ಯೆಗಳನ್ನೆದುರಿಸುತ್ತಿವೆ.

1994–95ರಲ್ಲಿ ಸರಕಾರಿ ವಲಯದ ಬ್ಯಾಂಕುಗಳು ರೂ. 1,116 ಕೋಟಿ ನಿವ್ವಳ ಲಾಭ ಗಳಿಸಿವೆ. ಒಟ್ಟು 19 ರಾಷ್ಟ್ರೀಕೃತ

* ಉಪಬಂಧ (provision) = ಕರಡುಸಾಲಗಳಿಂದ ಸಂಭವಿಸಬಹುದಾದ ನಷ್ಟವನ್ನು ಸರಿದೂಗಿಸಲು ಬ್ಯಾಂಕುಗಳು ತೆಗೆದಿರಿಸಬೇಕಾದ ಮೊತ್ತ.

ಬ್ಯಾಂಕುಗಳ ಪೈಕಿ ಈ ಬಾರಿ 11 ಬ್ಯಾಂಕುಗಳು ಲಾಭವನ್ನೂ, 8 ಬ್ಯಾಂಕುಗಳು ನಷ್ಟವನ್ನೂ ಹೊಂದಿವೆ. ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ ಎಲ್ಲ ಸಹವರ್ತಿ ಬ್ಯಾಂಕುಗಳೂ ಲಾಭ ಗಳಿಸಿವೆ.

ಸರಕಾರಿ ವಲಯದ ವಿವಿಧ ಬ್ಯಾಂಕುಗಳ ಕಾರ್ಯನಿರ್ವಹಣಾ ಲಾಭಗಳು, ಅವು ನಿಷ್ಕ್ರಿಯ ಆಸ್ತಿಗಳಿಗೆ ಮಾಡಿರುವ ಉಪಬಂಧಗಳು ಹಾಗೂ ಅವು ಗಳಿಸಿದ ನಿವ್ವಳ ಲಾಭ/ನಷ್ಟಗಳನ್ನು ಪಟ್ಟಿ–1ರಲ್ಲಿ ತೋರಿಸಲಾಗಿದೆ:

ಪಟ್ಟಿ–1

**ಸರಕಾರಿ ವಲಯದ ಬ್ಯಾಂಕುಗಳ ಕಾರ್ಯಫಲಿತಗಳು 1994–95**

(ರೂ. ಕೋಟಿಗಳಲ್ಲಿ)

| | ಬ್ಯಾಂಕಿನ ಹೆಸರು | ಕಾರ್ಯನಿರ್ವಹಣಾ ಲಾಭ/ನಷ್ಟ | ಉಪಬಂಧಗಳು | ನಿವ್ವಳ ಲಾಭ/ನಷ್ಟ |
|---|---|---|---|---|
| 1 | ಭಾರತೀಯ ಸ್ಟೇಟ್ ಬ್ಯಾಂಕ್ | 1951 | 1236 | 715 |
| 2 | ಸ್ಟೇಟ್ ಬ್ಯಾಂಕ್ ಆಫ್ ಬಿಕನೇರ್ ಮತ್ತು ಜೈಪುರ | 73 | 65 | 8 |
| 3 | ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದು | 160 | 116 | 44 |
| 4 | ಸ್ಟೇಟ್ ಬ್ಯಾಂಕ್ ಆಫ್ ಇಂದೂರು | 57 | 48 | 9 |
| 5 | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | 61 | 58 | 3 |
| 6 | ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ | 111 | 78 | 33 |
| 7 | ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ | 67 | 53 | 14 |
| 8 | ಸ್ಟೇಟ್ ಬ್ಯಾಂಕ್ ಆಫ್ ತಿರುವಾಂಕೂರು | 103 | 82 | 21 |
| 9 | ಅಲಹಾಬಾದ್ ಬ್ಯಾಂಕ್ | 30 | 106 | (—) 76 |
| 10 | ಆಂಧ್ರ ಬ್ಯಾಂಕ್ | 13 | 57 | (—) 44 |
| 11 | ಬ್ಯಾಂಕ್ ಆಫ್ ಬರೋಡ | 775 | 599 | 176 |
| 12 | ಬ್ಯಾಂಕ್ ಆಫ್ ಇಂಡಿಯಾ | 317 | 267 | 50 |
| 13 | ಬ್ಯಾಂಕ್ ಆಫ್ ಮಹಾರಾಷ್ಟ್ರ | 27 | 68 | (—) 41 |
| 14 | ಕೆನರಾ ಬ್ಯಾಂಕ್ | 552 | 348 | 204 |
| 15 | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | 49 | 133 | (—) 84 |
| 16 | ಕಾರ್ಪೊರೇಷನ್ ಬ್ಯಾಂಕ್ | 174 | 101 | 73 |
| 17 | ದೇನಾ ಬ್ಯಾಂಕ್ | 69 | 39 | 30 |
| 18 | ಇಂಡಿಯನ್ ಬ್ಯಾಂಕ್ | 113 | 99 | 14 |
| 19 | ಇಂಡಿಯನ್ ಓವರ್‌ಸೀಸ್ ಬ್ಯಾಂಕ್ | 76 | 66 | 10 |
| 20 | ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | 195 | 82 | 113 |
| 21 | ಪಂಜಾಬ್ ಮತ್ತು ಸಿಂದ್ ಬ್ಯಾಂಕ್ | 41 | 48 | (—) 7 |
| 22 | ಪಂಜಾಬ್ ನ್ಯಾಷನಲ್ ಬ್ಯಾಂಕ್ | 321 | 235 | 86 |
| 23 | ಸಿಂಡಿಕೇಟ್ ಬ್ಯಾಂಕ್ | 14 | 106 | (—) 92 |
| 24 | ಯುಕೋ ಬ್ಯಾಂಕ್ | 37 | 121 | (—) 84 |
| 25 | ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ | 285 | 179 | 106 |
| 26 | ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ | (—) 83 | 114 | (—) 197 |
| 27 | ವಿಜಯಾ ಬ್ಯಾಂಕ್ | 78 | 46 | 32 |
| | ಒಟ್ಟು | 5666 | 4550 | 1116 |
| | | [+5749. (—) 83] | | [+1741, --625] |

1992–93 ಮತ್ತು 1993–94ರಲ್ಲಿ ಸರಕಾರಿ ಕ್ಷೇತ್ರದ ಬ್ಯಾಂಕುಗಳು ಅಪಾರ ನಿವ್ವಳ ನಷ್ಟ ಅನುಭವಿಸಿದುದನ್ನು ನೆನಸಿಕೊಂಡರೆ ಈಗ ಈ ಬ್ಯಾಂಕುಗಳ ಬಗ್ಗೆ ಆತಂಕಪಡಬೇಕಾದ ಅಗತ್ಯವಿಲ್ಲವೆಂದು ತಿಳಿಯುತ್ತದೆ. ಹಿಂದಿನ ಸಾಲುಗಳ ನಷ್ಟದ ಮೊತ್ತವನ್ನು ಗಮನಿಸಿದಾಗ ಈಗ ಗಳಿಸಿರುವ ಲಾಭದ ಮಹತ್ವ ಮನವರಿಕೆಯಾಗುತ್ತದೆ.

ನಷ್ಟ ಅನುಭವಿಸಿರುವ ಬ್ಯಾಂಕುಗಳತ್ತ ದೃಷ್ಟಿ ಹರಿಸಿದರೆ, ಅಲ್ಲಿಯೂ ಸುಧಾರಣೆಯಾಗಿರುವುದು ಕಾಣುತ್ತದೆ. ಇವುಗಳ ಒಟ್ಟಾರೆ ನಷ್ಟದ ಮೊತ್ತ ಕಡಿಮೆಯಾಗಿದೆ. ಅಲಹಾಬಾದ್ ಬ್ಯಾಂಕ್, ಆಂಧ್ರ ಬ್ಯಾಂಕ್, ಬ್ಯಾಂಕ್ ಆಫ್ ಮಹಾರಾಷ್ಟ್ರ, ಸೆಂಟ್ರಲ್ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಯುಕೋ ಬ್ಯಾಂಕ್ ಮತ್ತು ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ—ಈ ಬ್ಯಾಂಕುಗಳು ಪ್ರಸ್ತುತ ವರ್ಷದಲ್ಲೂ ನಷ್ಟ ಅನುಭವಿಸಿವೆಯಾದರೂ ನಷ್ಟದ ಮೊತ್ತ ಇಳಿದಿದೆ. ಇಲ್ಲಿ ಎರಡು ಬ್ಯಾಂಕುಗಳ ಅಂಕಿಗಳು ಗಮನಾರ್ಹ. 93–94ರಲ್ಲಿ 712 ಕೋಟಿ ರೂ. ನಷ್ಟ ತೋರಿಸಿದ್ದ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ ಈಗ 84 ಕೋಟಿ ರೂ. ಮಾತ್ರ ನಷ್ಟ ತೋರಿಸಿದೆ. ಹಾಗೇ ಯುಕೋ ಬ್ಯಾಂಕ್ ಕೂಡ ತನ್ನ ನಷ್ಟವನ್ನು 547 ಕೋಟಿಯಿಂದ 84 ಕೋಟಿ ರೂ.ಗೆ ಇಳಿಸಿಕೊಂಡಿದೆ.

ಪಟ್ಟಿ–2

**ರಾಷ್ಟ್ರೀಕೃತ ಬ್ಯಾಂಕುಗಳ ಲಾಭ ನಷ್ಟಗಳು**

| ವರ್ಷ | ಒಟ್ಟು ಬ್ಯಾಂಕುಗಳ ಸಂಖ್ಯೆ | ಲಾಭದ ಬ್ಯಾಂಕುಗಳ ಸಂಖ್ಯೆ | ನಷ್ಟದ ಬ್ಯಾಂಕುಗಳ ಸಂಖ್ಯೆ | ನಿವ್ವಳ ಲಾಭ/ನಷ್ಟ |
|---|---|---|---|---|
| 1992–93 | 19 | 7 | 12 | —3,573 ಕೋಟಿ ರೂ. |
| 1993–94 | 19 | 7 | 12 | —4,705 ಕೋಟಿ ರೂ. |
| 1994–95 | 19 | 11 | 8 | + 271 ಕೋಟಿ ರೂ. |

ರಾಷ್ಟ್ರೀಕೃತ ಬ್ಯಾಂಕುಗಳ ಒಟ್ಟಾರೆ ಲಾಭ-ನಷ್ಟದ ಚಿತ್ರವನ್ನು ಪಟ್ಟಿ–2ರಲ್ಲೂ, ನಿವ್ವಳ ನಷ್ಟ ಅನುಭವಿಸಿದ ರಾಷ್ಟ್ರೀಕೃತ ಬ್ಯಾಂಕುಗಳ ನಷ್ಟದ ಅಂಕಿಗಳನ್ನು ಪಟ್ಟಿ–3ರಲ್ಲೂ ಕಾಣಿಸಲಾಗಿದೆ.

ಪಟ್ಟಿ–3

**ನಿವ್ವಳ ನಷ್ಟ ಅನುಭವಿಸಿದ ರಾಷ್ಟ್ರೀಕೃತ ಬ್ಯಾಂಕುಗಳು**

| | | ನಿವ್ವಳ ನಷ್ಟದ ಮೊತ್ತ |
|---|---|---|
| 1992–93 | 12 | 3,688 ಕೋಟಿ ರೂ. |
| 1993–94 | 12 | 5,079 ಕೋಟಿ ರೂ. |
| 1994–95 | 8 | 625 ಕೋಟಿ ರೂ. |

ಈ ಬ್ಯಾಂಕುಗಳ ಪೈಕಿ ಶೋಚನೀಯ ಪರಿಸ್ಥಿತಿಯೆಂದರೆ ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾದ್ದು. 1994–95ರಲ್ಲಿ ಗರಿಷ್ಠ ನಷ್ಟವನ್ನು ಅದು ದಾಖಲಿಸಿದೆ. ಈ ಬ್ಯಾಂಕಿನ ಕಾರ್ಯ ನಿರ್ವಹಣಾ ಫಲಿತವೂ ಋಣಾತ್ಮಕವಾಗಿದೆ. (–83 ಕೋಟಿ ರೂ.) ಕರಡು ಸಾಲಗಳಿಗೆ 114 ಕೋಟಿ ರೂ. ತೆಗೆದಿರಿಸಿರುವುದರಿಂದ ನಿವ್ವಳ ನಷ್ಟ 197 ಕೋಟಿ ರೂ.ಗಳಿಗೆ ಏರಿದೆ. ಈ ಬಾರಿ ಕಾರ್ಯ ನಿರ್ವಹಣಾ ನಷ್ಟ ಅನುಭವಿಸಿರುವ ಬ್ಯಾಂಕು ಇದೊಂದೇ.

ಆದಾಯ ಗುರುತಿಸುವಿಕೆ ಮತ್ತು ಆಸ್ತಿವರ್ಗೀಕರಣ ಕುರಿತ ಮಾನದಂಡಗಳಿಗೆ ಅನುಗುಣವಾಗಿ ಸಾಲಗಳಿಗೆ ಉಪಬಂಧ ಮಾಡಬೇಕಾಗಿ ಬಂದದ್ದರಿಂದ 1992–93 ಹಾಗೂ 1993–94ರಲ್ಲಿ ಬ್ಯಾಂಕುಗಳು ಅಪಾರ ನಷ್ಟ ತೋರಿಸುವುದು ಅನಿವಾರ್ಯವೇ ಆಗಿತ್ತು.† ಇದೀಗ, ಬದಲಾದ ಪರಿಸ್ಥಿತಿಗೆ ಹೊಂದಿಕೊಂಡಿರುವ ಬ್ಯಾಂಕುಗಳು ಕರಡು ಸಾಲಗಳಿಗೆ ಸಾಕಷ್ಟು ಉಪಬಂಧ ಏರ್ಪಡಿಸಿದರೂ ತಮ್ಮ ಲಾಭವನ್ನು ಏರಿಸಿಕೊಳ್ಳುವಲ್ಲಿ ಅಥವಾ ನಷ್ಟವನ್ನು ತಗ್ಗಿಸಿಕೊಳ್ಳುವಲ್ಲಿ ಬಹುತೇಕ ಸಫಲವಾಗಿವೆ ಎಂಬುದಂತೂ ಸ್ಪಷ್ಟವಾಗಿದೆ.

---

† ಬ್ಯಾಂಕಿನ ಸಾಲಗಳನ್ನು ಶಿಷ್ಟ ಆಸ್ತಿಗಳು, ಅರೆಶಿಷ್ಟ ಆಸ್ತಿಗಳು, ಸಂಶಯಾಸ್ಪದ ಆಸ್ತಿಗಳು ಹಾಗೂ ನಷ್ಟ ಆಸ್ತಿಗಳೆಂದು ನಾಲ್ಕು ವಿಧವಾಗಿ ವರ್ಗೀಕರಿಸಲಾಗಿದೆ.

ಅರೆಶಿಷ್ಟ, ಸಂಶಯಾಸ್ಪದ ಮತ್ತು ನಷ್ಟ ಆಸ್ತಿಗಳನ್ನು ನಿಷ್ಕ್ರಿಯ ಆಸ್ತಿಗಳೆನ್ನಲಾಗಿದೆ.

ಆದಾಯ ಗುರುತಿಸುವಿಕೆ : ನಿಷ್ಕ್ರಿಯ ಆಸ್ತಿಗಳ ಮೇಲಣ ಬಡ್ಡಿಯನ್ನು ಆದಾಯವೆಂದು ಪರಿಗಣಿಸುವಂತಿಲ್ಲ. ಒಂದು ಹಣಕಾಸು ವರ್ಷದಲ್ಲಿ ಅರೆಶಿಷ್ಟ ಎಂದು ಪರಿಗಣಿಸಲಾದ ಆಸ್ತಿಗೆ ಹಿಂದಿನ ವರ್ಷ ಹಾಕಿದ ಬಡ್ಡಿಯನ್ನೂ ಬಡ್ಡಿ ಆದಾಯದಿಂದ ಕಳೆದು ತೆಗೆಯಬೇಕು.

ಉಪಬಂಧ ವ್ಯವಸ್ಥೆ : ಅರೆಶಿಷ್ಟ ಆಸ್ತಿಗಳಿಗೆ ಶೇ. 10, ಸಂಶಯಾಸ್ಪದ ಸಾಲಗಳಲ್ಲಿ ಭದ್ರತೆಯಿಲ್ಲದ ಭಾಗಕ್ಕೆ ಶೇ. 100, ಉಳಿದುದಕ್ಕೆ ಶೇ. 20 ರಿಂದ 50, ನಷ್ಟ ಆಸ್ತಿಗಳಿಗೆ ಶೇ. 100—ಹೀಗೆ ಉಪಬಂಧ ಏರ್ಪಡಿಸಬೇಕು.

ಪಟ್ಟಿ–4

**ಸರಕಾರಿ ಕ್ಷೇತ್ರದ ಬ್ಯಾಂಕುಗಳ ನಿಷ್ಕ್ರಿಯ ಆಸ್ತಿಗಳು**

| | ಬ್ಯಾಂಕಿನ ಹೆಸರು | ಒಟ್ಟು ಮುಂಗಡಗಳು | ನಿಷ್ಕ್ರಿಯ ಆಸ್ತಿಗಳ ಮೊತ್ತ | ಶೇ. |
|---|---|---|---|---|
| 1 | ಭಾರತೀಯ ಸ್ಟೇಟ್ ಬ್ಯಾಂಕ್ | 48530 | 10516 | 21.67 |
| 2 | ಸ್ಟೇಟ್ ಬ್ಯಾಂಕ್ ಆಫ್ ಬಿಕನೇರ್ ಮತ್ತು ಜೈಪುರ | 2100 | 361 | 17.21 |
| 3 | ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ | 3303 | 520 | 15.75 |
| 4 | ಸ್ಟೇಟ್ ಬ್ಯಾಂಕ್ ಆಫ್ ಇಂದೂರು | 1250 | 133 | 10.65 |
| 5 | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | 1795 | 229 | 12.77 |
| 6 | ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ | 2768 | 316 | 11.41 |
| 7 | ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ | 1533 | 164 | 10.73 |
| 8 | ಸ್ಟೇಟ್ ಬ್ಯಾಂಕ್ ಆಫ್ ತಿರುವಾಂಕೂರು | 3126 | 347 | 11.10 |
| 9 | ಅಲಹಾಬಾದ್ ಬ್ಯಾಂಕ್ | 4192 | 1090 | 26.01 |
| 10 | ಆಂಧ್ರ ಬ್ಯಾಂಕ್ | 2410 | 345 | 14.30 |
| 11 | ಬ್ಯಾಂಕ್ ಆಫ್ ಬರೋಡ | 14784 | 2451 | 16.58 |
| 12 | ಬ್ಯಾಂಕ್ ಆಫ್ ಇಂಡಿಯಾ | 12208 | 2555 | 20.93 |
| 13 | ಬ್ಯಾಂಕ್ ಆಫ್ ಮಹಾರಾಷ್ಟ್ರ | 2344 | 603 | 25.71 |
| 14 | ಕೆನರಾ ಬ್ಯಾಂಕ್ | 10878 | 1365 | 12.55 |
| 15 | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | 7810 | 1951 | 24.98 |
| 16 | ಕಾರ್ಪೊರೇಷನ್ ಬ್ಯಾಂಕ್ | 2066 | 101 | 4.90 |
| 17 | ದೇನಾ ಬ್ಯಾಂಕ್ | 2871 | 490 | 17.06 |
| 18 | ಇಂಡಿಯನ್ ಬ್ಯಾಂಕ್ | 7875 | 1898 | 24.10 |
| 19 | ಇಂಡಿಯನ್ ಓವರ್‌ಸೀಸ್ ಬ್ಯಾಂಕ್ | 6628 | 1564 | 23.59 |
| 20 | ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | 3529 | 146 | 4.14 |
| 21 | ಪಂಜಾಬ್ ಮತ್ತು ಸಿಂದ್ ಬ್ಯಾಂಕ್ | 2438 | 539 | 22.09 |
| 22 | ಪಂಜಾಬ್ ನ್ಯಾಷನಲ್ ಬ್ಯಾಂಕ್ | 11731 | 1995 | 17.01 |
| 23 | ಸಿಂಡಿಕೇಟ್ ಬ್ಯಾಂಕ್ | 4421 | 1215 | 27.48 |
| 24 | ಯುಕೋ ಬ್ಯಾಂಕ್ | 4876 | 1302 | 26.70 |
| 25 | ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ | 7129 | 670 | 9.40 |
| 26 | ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ | 2815 | 819 | 29.10 |
| 27 | ವಿಜಯಾ ಬ್ಯಾಂಕ್ | 2356 | 316 | 13.41 |

ವಿವಿಧ ಸರಕಾರಿ ಕ್ಷೇತ್ರದ ಬ್ಯಾಂಕುಗಳ ಒಟ್ಟು ಮುಂಗಡಗಳು, ನಿಷ್ಕ್ರಿಯ ಆಸ್ತಿಗಳ ಮೊತ್ತ ಹಾಗೂ ಮುಂಗಡಗಳಿಗೆ ಹೋಲಿಸಿದಂತೆ ನಿಷ್ಕ್ರಿಯ ಆಸ್ತಿಗಳ **ಶೇಕಡಾ** ಪ್ರಮಾಣವನ್ನು ಪಟ್ಟಿ–4ರಲ್ಲಿ ನೀಡಲಾಗಿದೆ.

ಪಟ್ಟಿ–5

**ರಾಷ್ಟ್ರೀಕೃತ ಬ್ಯಾಂಕುಗಳು ಕಳೆದ ನಾಲ್ಕು ವರ್ಷಗಳಲ್ಲಿ ಏರ್ಪಡಿಸಿದ್ದ ಉಪಬಂಧಗಳು**

| ವರ್ಷ | ಉಪಬಂಧದ ಮೊತ್ತ (ಕೋಟಿ ರೂ.) |
|---|---|
| 1991–92 | 18.09 |
| 92–93 | 4,445.00 |
| 93–94 | 6,336.00 |
| 94–95 | 2,812.00 |

ಉಪಬಂಧದ ಮೊತ್ತ 1992-93ರಲ್ಲಿ ಬದಲಾದ ಮಾನದಂಡಗಳ ಪರಿಣಾಮವಾಗಿ— ಅತ್ಯಂತ ತೀವ್ರವಾಗಿ ಏರಿದೆ. 91-92ರಲ್ಲಿ ಕೇವಲ 18 ಕೋಟಿ ರೂ. ಉಪಬಂಧ ಏರ್ಪಡಿಸಿದ್ದ ರಾಷ್ಟ್ರೀಕೃತ ಬ್ಯಾಂಕುಗಳು ಮುಂದಿನ ಸಾಲಿನಲ್ಲಿ 4,445 ಕೋಟಿಯಷ್ಟು ಮೊತ್ತವನ್ನು ತಮ್ಮ ಲಾಭದಿಂದ ತೆಗೆದಿಡಬೇಕಾದ್ದರಿಂದ ತತ್ತರಿಸುವಂತಾಯಿತು. ಇದಕ್ಕೆ ಹೋಲಿಸಿದಾಗ 93–94ರ ಸ್ಥಿತಿ ಅಷ್ಟೇನೂ ಕೆಟ್ಟದ್ದೆನಿಸಲಾರದು. ಆದರೂ ಉಪಬಂಧದ ಒಟ್ಟು ಮೊತ್ತ 6,336 ಕೋಟಿ ರೂ.ಗಳಿಗೆ ಏರಿದೆ. (ಶೇ. 40ರಷ್ಟು ಏರಿಕೆ) ಈ ಹಿನ್ನಲೆಯಲ್ಲಿ ನೋಡಿದಾಗ 94–95ರಲ್ಲಿ ಉಪಬಂಧದ ಮೊತ್ತ ಗಣನೀಯವಾಗಿ ಇಳಿದಿರುವುದು ಕೆಲವರಲ್ಲಿ ಕುತೂಹಲ ಮೂಡಿಸಬಹುದು. ಈ ಇಳಿಕೆಗೆ ಒಂದು ಸ್ಪಷ್ಟವಾದ ಕಾರಣವಿದೆ. ಅರೆಶಿಷ್ಟ ಸಾಲಗಳು ಹಾಗೂ ಸಂಶಯಾಸ್ಪದ ಸಾಲಗಳಿಗೆ ಹೊಸ ನೀತಿಗೆ ತಕ್ಕಂತೆ ಕಳೆದ ಎರಡು ವರ್ಷಗಳಲ್ಲೇ ಹೆಚ್ಚಿನಂಶ ಉಪಬಂಧ ಏರ್ಪಡಿಸಲಾಗಿದ್ದುದರಿಂದ ಉಪಬಂಧದ ಮೊತ್ತದಲ್ಲಿನ ಇಳಿಕೆ ನಿರೀಕ್ಷಿತವೇ ಆಗಿತ್ತು.

ಉಪಬಂಧದ ಈ ಅಂಕಿಗಳು ಕೇವಲ ರಾಷ್ಟ್ರೀಕೃತ ಬ್ಯಾಂಕುಗಳದ್ದು ಮಾತ್ರ— ಸರಕಾರಿ ಕ್ಷೇತ್ರದ ಎಲ್ಲ ಬ್ಯಾಂಕುಗಳ ಅಂಕಿಗಳು ಇದರಲ್ಲಿ ಸೇರಿಲ್ಲವಾದರೂ ಲಾಭದ ಮೇಲೆ ಉಪಬಂಧದ ವ್ಯವಸ್ಥೆಯ ಪರಿಣಾಮವನ್ನು ಇದು ಸ್ಪಷ್ಟವಾಗಿ ಬಿಂಬಿಸುತ್ತದೆ. (1994–95ರಲ್ಲಿ ಸರಕಾರಿ ಕ್ಷೇತ್ರದ ಎಲ್ಲ ಬ್ಯಾಂಕುಗಳೂ ಮಾಡಿರುವ ಉಪಬಂಧದ ಮೊತ್ತಗಳನ್ನು ಪಟ್ಟಿ–1ರಲ್ಲಿ ತೋರಿಸಲಾಗಿದೆ.)

94–95ರ ಸಾಲಿನಲ್ಲಿಯೇ ಉಪಬಂಧಗಳ ಮೊತ್ತ ತೀವ್ರವಾಗಿ ಕಡಿಮೆಯಾಗಿರುವುದರಿಂದ ಉಪಬಂಧ ವ್ಯವಸ್ಥೆಗೆ ಸಂಬಂಧಿಸಿದ ಹೊಸ ಮಾನದಂಡಗಳು ಇನ್ನು ಮುಂದೆ ಬ್ಯಾಂಕುಗಳನ್ನು ಅಷ್ಟಾಗಿ ಬಾಧಿಸುವುದಿಲ್ಲ ಎಂದು ಭಾವಿಸಲು ಅಡ್ಡಿಯಿಲ್ಲ.

ನಿಷ್ಕ್ರಿಯ ಆಸ್ತಿಗಳ ಶೇಕಡಾ ಪ್ರಮಾಣ 93-94ರಲ್ಲಿ 25 ಇದ್ದುದು 94–95ರಲ್ಲಿ 20ಕ್ಕೆ ಇಳಿದಿದೆ. ತಮ್ಮ ಸಾಲಖಾತೆಗಳಲ್ಲಿ ನಿಷ್ಕ್ರಿಯ ಆಸ್ತಿಗಳ ಅಂಕಿಗಳತ್ತ ಬ್ಯಾಂಕುಗಳು ಯುಕ್ತ ರೀತಿಯಲ್ಲಿ ಗಮನಹರಿಸದೆ ಹೋಗಿದ್ದರೆ ಈ ಸುಧಾರಣೆ ಕಂಡುಬರುವುದು ಸಾಧ್ಯವಿರಲಿಲ್ಲ.

ಬ್ಯಾಂಕುಗಳ ಈ ಉತ್ತಮ ಸಾಧನೆಗೆ ಇನ್ನಿತರ ಕಾರಣಗಳೂ ಇವೆ. 1994–95ರ ಸಾಲಿನಲ್ಲಿ ಬ್ಯಾಂಕುಗಳು ತಮ್ಮ ಪಾವತಿ ಬಂಡವಾಳದ ಗರಿಷ್ಠ ಶೇ. 75 ರಷ್ಟು ಭಾಗವನ್ನು ನಷ್ಟಗಳನ್ನು ತೊಡೆದುಹಾಕಲು ಉಪಯೋಗಿಸಿಕೊಳ್ಳುವುದಕ್ಕೆ ನೆರವಾಗುವಂತೆ ಸುಗ್ರೀವಾಜ್ಞೆಯೊಂದರ ಮೂಲಕ ಬ್ಯಾಂಕಿಂಗ್ ಕಂಪನಿಗಳ ವಶಾವಣೆ ಅಧಿನಿಯಮ 1970 ಮತ್ತು ಬ್ಯಾಂಕಿಂಗ್ ಕಂಪನಿ (ಉದ್ಯಮ ವರ್ಗಾವಣೆ) ಅಧಿನಿಯಮ 1980 ಇವುಗಳಿಗೆ ತಿದ್ದುಪಡಿ ಮಾಡಲಾಯಿತು. ಇದರಿಂದ ಕೆಲವು ಬ್ಯಾಂಕುಗಳು ಒಳ್ಳೆಯ ಫಲಿತಗಳನ್ನು ತೋರುವುದು ಸಾಧ್ಯವಾಯಿತು.

ಬಹುಕಾಲ ಜಡವಾಗಿದ್ದ ರಿಸರ್ವ್ ಬ್ಯಾಂಕಿನ ಉಸ್ತುವಾರಿ ವ್ಯವಸ್ಥೆ ಎಚ್ಚೆತ್ತುಕೊಂಡು ಚುರುಕಾಗಿದ್ದುದರಿಂದಲೂ ಬ್ಯಾಂಕುಗಳ ಸಾಧನೆಗೆ ನೆರವು ದೊರೆಯಿತು. ಬ್ಯಾಂಕುಗಳ ಬಂಡವಾಳ ವೃದ್ಧಿಗೆ ಸರಕಾರ ಬೆಂಬಲ ನೀಡುವ ಸಂದರ್ಭದಲ್ಲಿ ರಿಸರ್ವ್ ಬ್ಯಾಂಕ್ 19 ಬ್ಯಾಂಕುಗಳ ಜತೆ ಒಪ್ಪಂದ ಮಾಡಿಕೊಂಡು ಸಾಧನೆಗೆ ಮಾನದಂಡಗಳನ್ನೂ, ಗುರಿಗಳನ್ನೂ ನೀಡಿತ್ತು. ಬ್ಯಾಂಕುಗಳ ವ್ಯವಹಾರದಲ್ಲಿ ವಿವಿಧೀಕರಣಕ್ಕೆ ಅವಕಾಶ ಮಾಡಿಕೊಟ್ಟದ್ದೂ ಇನ್ನೊಂದು ಕಾರಣ. ಎರಡು ಲಕ್ಷ ರೂ. ಮೀರಿದ ಸಾಲಗಳ ಮೇಲಿನ ಬಡ್ಡಿದರಗಳಿಗೆ ಸಂಬಂಧಿಸಿದಂತೆ ನಿಯಂತ್ರಣ ಸಡಿಲಿಸಿದ್ದು ಕೂಡ ಮುಖ್ಯವೇ. ಇವೆಲ್ಲಕ್ಕಿಂತ ಮುಖ್ಯವಾಗಿ ಬ್ಯಾಂಕುಗಳ ಸೇವಾ ಶುಲ್ಕಗಳನ್ನು ಗಣನೀಯವಾಗಿಯೇ ಏರಿಸಿದ್ದನ್ನು ಹೇಳಬೇಕಾಗುತ್ತದೆ. ಆದರೆ, ಬಹು ವರ್ಷಗಳ ಅನಂತರ ಮಾಡಿದ ಸೇವಾಶುಲ್ಕದ ಈ ಏರಿಕೆಯ ಕಾಣಿಕೆ ಏನೇ ಇದ್ದರೂ ಬ್ಯಾಂಕುಗಳ ಒಟ್ಟಾರೆ ಸಾಧನೆ ಮೆಚ್ಚಲೇಬೇಕೆನ್ನುವಂತಿದೆ.

ಖಾಸಗಿ ಬ್ಯಾಂಕುಗಳ ಪೈಪೋಟಿ ಈ ಬ್ಯಾಂಕುಗಳನ್ನು ಇನ್ನೂ ಅಷ್ಟಾಗಿ ಬಾಧಿಸಿಲ್ಲ. ಜತೆಗೆ ಗಣಕೀಕರಣದ ಫಲವಾಗಿ ಬ್ಯಾಂಕುಗಳ ಲಾಭಪ್ರದತೆ ಎಷ್ಟು ಮಟ್ಟಿಗೆ ಉತ್ತಮಗೊಂಡಿದೆ ಎಂದು ಈ ಸಾಲಿನ ಫಲಿತಗಳ ಆಧಾರದಿಂದ ಹೇಳುವಂತಿಲ್ಲ. ನಿಧಾನವಾಗಿ ಆರಂಭಗೊಂಡಿರುವ ಗಣಕೀಕರಣ ಪ್ರಕ್ರಿಯೆ 95–96 ಹಾಗೂ 96–97ನೇ ಸಾಲಿನಲ್ಲಿ ಸಾಕಷ್ಟು ಚುರುಕುಗೊಂಡಿದೆ. ಇದರ ಪರಿಣಾಮವಾಗಿ ಉದರಿ ಉಸ್ತುವಾರಿಯಲ್ಲಿ ಉತ್ತಮಿಕೆ ಸಾಧಿಸುವುದು ಮತ್ತು ಸಿಬ್ಬಂದಿ ವೆಚ್ಚವನ್ನು ಕಡಿಮೆ ಮಾಡಿಕೊಳ್ಳುವುದು ಸಾಧ್ಯವಾಗಿ ಬ್ಯಾಂಕುಗಳ ಲಾಭಪ್ರದತೆ ಹೆಚ್ಚುವುದು ಖಚಿತ. ಆದರೆ ಇದಕ್ಕೆ ಇನ್ನಷ್ಟು ಕಾಲಾವಕಾಶ ಬೇಕಾಗುತ್ತದೆ. ಹಾಗೆಯೇ, ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತಿತರ ಕೆಲವು ಬ್ಯಾಂಕುಗಳು ಇದೀಗ ಕೈಗೆತ್ತಿಕೊಂಡಿರುವ ಆಂತರಿಕ ಪುನರ್‌ರಚನೆಯ ಕ್ರಮಗಳೂ ಫಲ ನೀಡಲು ಸಮಯ ಬೇಕು.

ಹಣಕಾಸು ವರ್ಷದ ಇನ್ನೊಂದು ಅವಧಿಯೂ ಮಾರ್ಚ್ 96

ರಲ್ಲಿ ಮುಗಿದಿದೆ. ಈ ಸಾಲಿನ ಲೆಕ್ಕಪರಿಶೋಧನೆಯೂ ಬಹುತೇಕ ಮುಗಿದಿದ್ದು ಬ್ಯಾಂಕುಗಳ ಲಾಭದ ಅಂಕಿಗಳು ಇಷ್ಟರಲ್ಲೇ ಹೊರ ಬೀಳಲಿವೆ. ಈ ಸಾಲಿನ ಗುರಿಗಳು ದೊಡ್ಡವು. ಬಂಡವಾಳ ಪರ್ಯಾಪ್ತತೆಯ ದೃಷ್ಟಿಯಿಂದ ಶೇ. 8 ಬಂಡವಾಳದ ಗುರಿ ತಲುಪುವುದು ಸಾಧ್ಯವಾಗುವುದೆಂಬ ನಿರೀಕ್ಷೆ ಇದೆಯಾದರೂ ನಿಷ್ಕ್ರಿಯ ಆಸ್ತಿಗಳನ್ನು ಶೇ. 10ಕ್ಕೆ ಇಳಿಸುವುದು ಕಷ್ಟವೇ. ಹೀಗಿದ್ದರೂ ಈ ವರ್ಷ ಸರಕಾರಿ ಕ್ಷೇತ್ರದ ಬ್ಯಾಂಕುಗಳ ಸಾಧನೆ ಮತ್ತಷ್ಟು ಉತ್ತಮಗೊಳ್ಳುವುದೆಂದು ನಂಬಲು ಕಾರಣಗಳಿವೆ. ಈ ಸಾಲಿನಲ್ಲಿ ಬ್ಯಾಂಕುಗಳ ಸಿಬ್ಬಂದಿಯ ವೇತನ ಪರಿಷ್ಕರಣದ ಫಲವಾಗಿ ಎರಡು ವರ್ಷಗಳ ವೇತನ ಏರಿಕೆಯ ಹಿಂಬಾಕಿ ನೀಡ ಬೇಕಾಗಿ ಬಂದುದರಿಂದ ಲಾಭ ಕೊಂಚ ಕಡಿಮೆಯಾದರೂ ಅದು ಕಳೆದ ಸಾಲಿನ ಲಾಭಕ್ಕಿಂತ ಕಡಿಮೆಯಾದೀತೇ ಎಂದು ಕಾದು ನೋಡಬೇಕು.

ಒಟ್ಟಿನಲ್ಲಿ 1994–95ರಲ್ಲಿ ಸರಕಾರೀ ಕ್ಷೇತ್ರದ ಬ್ಯಾಂಕುಗಳ ಸಾಧನೆ ಉತ್ತಮವಾಗಿತ್ತು. ಈ ಬಾರಿಯೂ ಅಂಥದೇ ಸಾಧನೆ ತೋರಿಸುವುದು ಸಾಧ್ಯವಾದರೆ ಮತ್ತಷ್ಟು ಬ್ಯಾಂಕುಗಳು ಬಂಡವಾಳ ಮಾರುಕಟ್ಟೆ ಪ್ರವೇಶಿಸಲು ಅನುವಾಗುತ್ತದೆ. ಗ್ರಾಹಕ ಸೇವೆಯ ದೃಷ್ಟಿಯಿಂದ ಕಳೆದೆರಡು ವರ್ಷಗಳಲ್ಲಿ ಅಂಥ ಮಹತ್ವದ ಬದಲಾವಣೆಗಳೇನೂ ಆಗಿಲ್ಲ. ಇನ್ನು ಮುಂದೆ ಈ ದಿಸೆಯಲ್ಲಿ ಮತ್ತಷ್ಟು ಗಮನ ಹರಿಸಲು ಬ್ಯಾಂಕುಗಳಿಗೆ ಸಾಧ್ಯವಾದೀತು. ಗಣಕೀಕರಣ, ಆಂತರಿಕ ಪುನರ್ರಚನೆ. ಬ್ಯಾಂಕ್ ಶಾಖೆಗಳ ವಿಲೀನ, ಬಂಡವಾಳ ವೃದ್ಧಿ, ನಿಷ್ಕ್ರಿಯ ಆಸ್ತಿಗಳ ಸಮರ್ಥ ಉಸ್ತುವಾರಿ ಮುಂತಾದ ಕ್ರಮಗಳಿಂದ ಮುಂಬರುವ ವರ್ಷಗಳು ಸರಕಾರಿ ಕ್ಷೇತ್ರದ ಬ್ಯಾಂಕುಗಳಿಗೆ ಮತ್ತು ಅವುಗಳ ಗ್ರಾಹಕರಿಗೆ ಆಶಾದಾಯಕ ವಾಗಿದ್ದಾವು. ●



# ಬ್ಯಾಂಕ್ ನೌಕರರಲ್ಲಿ ಸಾಹಿತ್ಯಾಸಕ್ತಿ

[2ನೇ ಪುಟದಿಂದ ಮುಂದುವರಿದಿದೆ]

ಆನಂದ ಕೊಡಬಲ್ಲ ಸಾಹಿತ್ಯ ಕಲೆಗಳನ್ನು ಹವ್ಯಾಸವಾಗಿರಿಸಿಕೊಂಡ ವ್ಯಕ್ತಿಗಳಲ್ಲಿ ಹೆಚ್ಚಿನವರು ತಾತ್ಸಾರ, ದುರಾಗ್ರಹ ಇತ್ಯಾದಿ ವಿಷಯ ಗಳಿಂದ ಮುಕ್ತರಾಗಲು ಸಾಧ್ಯವಿದೆ. ಹಾಗೆ ಮುಕ್ತರಾದವರು ಇತರ ಸಮಸ್ಯೆ, ಸಂಕಟಗಳನ್ನು ಸಮಾಧಾನದಿಂದ ಕೇಳಿ ತಮ್ಮಿಂದಾಗುವ ಸಹಕಾರ ನೀಡುತ್ತಾರೆ. ಯಾವುದೋ ಒಂದು ನಿಮಿಷದಲ್ಲಾಗುವ ಕೆಲಸಕ್ಕೆ ನಾಳೆ ಬನ್ನಿ ಎನ್ನುವ ಬದಲು ಸ್ವಲ್ಪ ನಿಲ್ಲಿ ಮಾಡಿಕೊಡು ತ್ತೇನೆ ಎಂದರೆ ಆ ಗ್ರಾಹಕನಿಗೆ ಎಂಥ ಸಂತೋಷವಾಗುತ್ತದೆ! ಅವನಿಗೆ ಎಷ್ಟು ಆನಂದವಾಗುತ್ತದೆ ಎಂದು ಪಾಷಾಣ ಬುದ್ಧಿ ಜೀವಿಗೆ ತಿಳಿಯದು. ಸಾಹಿತ್ಯ ಅಭ್ಯಾಸದಿಂದಾಗಿ ಹೃದಯ ಆರ್ದ್ರ ವಾದವನಿಗೆ ಮನವರಿಕೆಯಾಗುತ್ತದೆ. ತನ್ನಂತೆ ಪರರ ಬಗೆಯುವ ವಿಶಾಲ ಮನಸ್ಸು ಸಾಹಿತ್ಯದ ಅಭ್ಯಾಸದಿಂದ ಬರುತ್ತದೆ.

ಸಾಹಿತ್ಯದ ಅಭ್ಯಾಸ ಎಂದಾಗ ಎಲ್ಲರೂ ಸಾಹಿತಿಗಳೇ ಆಗಬೇಕು ಎಂದು ಅರ್ಥವಲ್ಲ. ಆದರೆ ಬದುಕಿನಲ್ಲಿ ಹಣಕ್ಕಿಂತ ಮೇಲಾದ, ಅಥವಾ ಕನಿಷ್ಠ ಹಣದಷ್ಟೇ ಮೌಲ್ಯವಾದ ಹಲವು ವಿಷಯಗಳಿವೆ. ಒಬ್ಬನ ಶಾರೀರಿಕ ಅಗತ್ಯಗಳನ್ನು ಪೂರೈಸಲು ಹಣ ಸಂಪಾದನೆಗಾಗಿ ಉದ್ಯೋಗ ಮಾಡಬಹುದು. ಆದರೆ ಅವನ ಮನಸ್ಸಿನ ಹಸಿವು ಬಾಯಾರಿಕೆಗಳನ್ನು ನಿವಾರಿಸಲು ಸಾಹಿತ್ಯ, ಕಲೆಗಳು ಸಹಾಯ ಮಾಡುತ್ತವೆ. ಅಂಥವರಿಗೆ ಸರಿಯಾದ ಪ್ರೋತ್ಸಾಹವನ್ನು ಬ್ಯಾಂಕ್ ಗಳು ನೀಡಿದಾಗ ಉದ್ಯೋಗಿಗೆ ಮಾನಸಿಕ ತೃಪ್ತಿ. ಬ್ಯಾಂಕಿಗೆ ಕೂಡ ಸಂಸ್ಕೃತಿವಂತರಾದ ಉದ್ಯೋಗಿಗಳಿದ್ದಾರೆ ಎಂಬ ಶ್ರೇಯಸ್ಸು!

ಈಗಾಗಲೇ ವಿವರಿಸಿದಂತೆ ಬ್ಯಾಂಕಿಂಗ್ ರಂಗದಲ್ಲಿ ಸಾಹಿತ್ಯಾ ಸಕ್ತಿಗಳಿಗೆ ಪ್ರೋತ್ಸಾಹ ನೀಡುವ ವಾತಾವರಣ ಇಲ್ಲ. ಈ ನಿರಾಶೆಯ ನಡುವೆಯೂ ಅಲ್ಲಲ್ಲಿ ಕೆಲವು ಬ್ಯಾಂಕ್‌ಗಳಲ್ಲಿ ಸಾಹಿತ್ಯಾಸಕ್ತರಾದ ಕರ್ಮಿಗಳು ಒಟ್ಟು ಸೇರಿ ಸಾಹಿತ್ಯ ಕಲೆಗಳ ಅಭಿರುಚಿ ಬೆಳೆಸುವ ಸಂಘಟನೆಗಳನ್ನು ರಚಿಸಿಕೊಂಡಿದ್ದಾರೆ. ತಮ್ಮ ಬ್ಯಾಂಕ್‌ಗಳ ಆಡಳಿತೆಯವರನ್ನು ಒಲಿಸಿ ಸಹಕಾರ ಪ್ರೋತ್ಸಾಹಗಳನ್ನು ಪಡೆಯು ವಲ್ಲೂ ಯಶಸ್ವಿಯಾಗಿದ್ದಾರೆ. ಅಲ್ಲದೆ, ಭಾರತೀಯ ಬ್ಯಾಂಕ್‌ಗಳ ಸಂಘದ ಕ್ರೀಡಾಮಂಡಳಿಯು ಸಾಹಿತ್ಯಕ್ಕೆ ಅಲ್ಲವಾದರೂ ಸಂಗೀತ ನಾಟಕಾದಿಗಳನ್ನು ತಮ್ಮ ಕಾರ್ಯಕಲಾಪಗಳಲ್ಲಿ ಸೇರಿಸಿರುವುದು ಈ ದಿಸೆಯಲ್ಲಿ ಮಹತ್ವದ ಸಾಧನೆ. ಮುಂದೆ ಸಾಹಿತ್ಯ ಸಂಬಂಧಿ ಯಾದ ಚಟುವಟಿಕೆಗಳಿಗೂ ಎಲ್ಲ ಬ್ಯಾಂಕ್‌ಗಳಲ್ಲಿ ಕೂಡಾ ಅಧಿಕೃತ ಸ್ಥಾನಮಾನ, ಸೌಲಭ್ಯಗಳು ದೊರಕಬಹುದೆಂದು ಆಶಿಸುತ್ತೇನೆ.

ಇಂಥ ದಿನಗಳು ಬಂದಾಗ ಬ್ಯಾಂಕುಗಳು ನಿಜಕ್ಕೂ ಮಾನವೀಯ ಮುಖಗಳನ್ನು ಪಡೆದಂತಾಗುತ್ತದೆ.

# ಸಾಹಸ ಬಂಡವಾಳ

**ಬಿ. ಎನ್. ರಮೇಶ್ ಕುಮಾರ್**
ಅಧಿಕಾರಿ, ಕೆನರಾ ಬ್ಯಾಂಕ್, ಪ್ರಧಾನ ಕಛೇರಿ ಬೆಂಗಳೂರು

ಸಾಹಸ ಬಂಡವಾಳ ತಂತ್ರಜ್ಞಾನದ ಅಭಿವೃದ್ಧಿ ಉದ್ಯಮಶೀಲತೆ ಹಾಗೂ ಸೃಜನಶೀಲತೆಯನ್ನು ಬೆಳೆಸಲು ಧನ ಪೋಷಿಸುವ ಒಂದು ವಿಧಾನ. ಇಂತಹ ಪರಿಸರದ ಸೃಷ್ಟಿಯಿಂದಲೇ ದೇಶದ ಭವಿಷ್ಯ ಉಜ್ವಲವಾಗುವುದು ಸಾಧ್ಯ.

ಭಾರತದಲ್ಲಿನ ವಿಭಿನ್ನ ಹಣಕಾಸು ಸಂಸ್ಥೆಗಳು ತಮ್ಮವೇ ಆದ ದೀರ್ಘ ಇತಿಹಾಸ ಹೊಂದಿವೆ. ಈ ಹಣಕಾಸು ಸಂಸ್ಥೆಗಳ ಪೈಕಿ ವಾಣಿಜ್ಯ ಬ್ಯಾಂಕುಗಳ ಇತಿಹಾಸ ಸುದೀರ್ಘವಾದುದು. ಬ್ಯಾಂಕಿಂಗ್ ವ್ಯವಸ್ಥೆ ನಮ್ಮ ದೇಶದಲ್ಲಿ ಬಹಳ ಹಿಂದಿನಿಂದ ಅಸ್ತಿತ್ವದಲ್ಲಿದ್ದರೂ ಇತ್ತೀಚಿನ ಕೆಲವು ದಶಕಗಳಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದೆ. ಬ್ಯಾಂಕುಗಳು ತಮ್ಮ ಎಂದಿನ ಸಾಂಪ್ರದಾಯಿಕ ಹಣಕಾಸು ಸೇವೆಗಳಿಗೇ ಗಂಟುಬೀಳದೆ ನವೀನ ಹಾಗೂ ವೈವಿಧ್ಯಮಯ ಸೇವೆಗಳನ್ನು ತಮ್ಮ ಬತ್ತಳಿಕೆಗೆ ಸೇರಿಸಿಕೊಳ್ಳುತ್ತಾ ಮುನ್ನಡೆದಿರುವುದು ಒಂದು ಸ್ತುತ್ಯರ್ಹವಾದ ವಿಷಯ.

ಸಮಾಜದ ವಿವಿಧ ಹಣಕಾಸು ಬೇಡಿಕೆಗಳನ್ನು ಪೂರೈಸುವ ಉದ್ದೇಶದಿಂದ ದೇಶದ ವಾಣಿಜ್ಯ ಹಾಗೂ ಅಭಿವೃದ್ಧಿ ಬ್ಯಾಂಕುಗಳು ವಿಶಿಷ್ಟವಾದ ಹಣಕಾಸು ಸಂಸ್ಥೆ ಅಂಗಸಂಸ್ಥೆಗಳನ್ನು ಹುಟ್ಟುಹಾಕಿರುವುದು ಈ ಕ್ಷೇತ್ರದ ಮಹತ್ವಪೂರ್ಣ ಬೆಳವಣಿಗೆಗಳಲ್ಲಿ ಒಂದು.

ಬ್ಯಾಂಕುಗಳು ಇತ್ತೀಚಿನ ದಿನಗಳಲ್ಲಿ ಇಂತಹ ನವೀನತಮ ಸೇವೆಗಳಿಗೆ ಹೆಚ್ಚು ಒತ್ತುಕೊಡಲು ಮುಖ್ಯ ಕಾರಣಗಳೆಂದರೆ :

1 ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳುವುದು ;
2 ಅಗಾಧವಾಗಿ ಬೆಳೆಯುತ್ತಿರುವ ಗ್ರಾಹಕರ ಹಣಕಾಸು ಬೇಡಿಕೆಗಳಿಗೆ ಓಗೊಡುವುದು ;
3 ನವಭಾರತದ ನಿರ್ಮಾಣದಲ್ಲಿ ತಮ್ಮ ನಿರ್ಧಾರಿತ ಪಾತ್ರವನ್ನು ಸಮರ್ಪಕವಾಗಿ ನಿರ್ವಹಿಸುವುದು ; ಹಾಗೂ ಪ್ರಪಂಚದ ಇತರ ಮುಂದುವರಿದ ದೇಶಗಳ ಬ್ಯಾಂಕಿಂಗ್ ವ್ಯವಸ್ಥೆಗಳಿಗೆ ಸರಿಸಮನಾಗಿ ನಿಲ್ಲುವ ಹಂಬಲ.

ರಾಷ್ಟ್ರಸೇವೆಯಲ್ಲಿ ತನ್ನ ಪಾತ್ರ ಹಾಗೂ ಜವಾಬ್ದಾರಿಗಳೇನೆಂಬುದನ್ನು ಅರಿತು ನವೀನತೆಯೊಡನೆ, ವಹಿವಾಟನ್ನೂ ಕಾರ್ಯಕ್ಷಮತೆಯನ್ನೂ ಹೆಚ್ಚಿಸಿಕೊಂಡು ತನ್ನ ಪರಿಸರದ ಬದಲಾವಣೆಗಳಿಗೆ ಸ್ಪಂದಿಸುತ್ತಾ, ಉದ್ಭವಿಸಿದ ಹೊಸ ಜವಾಬ್ದಾರಿಗಳನ್ನು ಉತ್ತಮವಾಗಿ ನಿರ್ವಹಿಸುತ್ತಾ ಸಾಗಿರುವ ಬ್ಯಾಂಕಿಂಗ್ ಕ್ಷೇತ್ರದ ಸಾಧನೆ ಶ್ಲಾಘನೀಯ.

ಹೀಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಉದಯಿಸಿದ ವಿಶಿಷ್ಟ ಹಣಕಾಸು ಸಂಸ್ಥೆಗಳ ಪೈಕಿ 'ಸಾಹಸ ಬಂಡವಾಳ ಸಂಸ್ಥೆಗಳು' ಹಣಕಾಸು ಕ್ಷೇತ್ರಕ್ಕೆ ಇತ್ತೀಚಿನ ಸೇರ್ಪಡೆಗಳಲ್ಲೊಂದು.

**ಸಾಹಸ ಬಂಡವಾಳ ಎಂದರೇನು ?**

'ಸಾಹಸ ಬಂಡವಾಳ' ಎಂದರೇನೆಂದು ತಿಳಿಯಲು, ಅದರ ಅರ್ಥವನ್ನು ಗ್ರಹಿಸಲು, ಆ ಪದಪುಂಜದಲ್ಲಿ ಅಡಕವಾಗಿರುವ 'ಸಾಹಸ' ಮತ್ತು 'ಬಂಡವಾಳ' ಎಂಬ ಎರಡು ಪದಗಳ ಅರ್ಥವನ್ನು ತಿಳಿದುಕೊಳ್ಳುವುದು ಆವಶ್ಯಕ.

'ಸಾಹಸ' ಎಂದರೆ ನಷ್ಟ ಸಂಭವನೀಯ ಅಥವಾ ಫಲಿತಾಂಶ ಅನಿಶ್ಚಿತವಿರುವ ಕಾರ್ಯವೆಂದೂ, 'ಬಂಡವಾಳ' ಎಂದರೆ ಉದ್ಯಮವನ್ನು ಆರಂಭಿಸಲು ಆವಶ್ಯಕವಾದ ಸಂಪನ್ಮೂಲವೆಂದೂ ನಿಘಂಟಿನಲ್ಲಿ ಅರ್ಥೈಸಲಾಗಿದೆ.

ಸಂಕ್ಷಿಪ್ತವಾಗಿ ಹೇಳುವುದಾದರೆ ನಷ್ಟಸಂಭವಿಸುವ ಅವಕಾಶಗಳಿರುವ ಅಥವಾ ವರ್ಷಾಂತ್ಯದ ಫಲಿತಾಂಶ ಅನಿಶ್ಚಿತವಾಗಿರುವ ಉದ್ದಿಮೆಯೊಂದಕ್ಕೆ ಲಭ್ಯವಿರುವ ಬಂಡವಾಳಕ್ಕೆ 'ಸಾಹಸ ಬಂಡವಾಳ' ಎಂದು ಹೆಸರು.

ಸ್ಥೂಲವಾಗಿ ಹೇಳುವುದಾದರೆ, ಉತ್ತಮ ಬೆಳವಣಿಗೆಯ ಅವಕಾಶ ಹೊಂದಿರುವ ಹಾಗೂ ಹಣಕಾಸಿನ ಉತ್ತಮ ಗಳಿಕೆ ಸಾಮರ್ಥ್ಯವಿರುವ (ಈ ಸ್ಥಿತಿ ಏರುಪೇರಾಗುವ ಅವಕಾಶವೂ ಇರುವ) ಉದ್ಯಮವೊಂದರಲ್ಲಿ ತೊಡಗಿಸುವ ದೀರ್ಘಾವಧಿ ಬಂಡವಾಳವನ್ನು 'ಸಾಹಸ ಬಂಡವಾಳ' ಎನ್ನಬಹುದು.

ಉದ್ಯಮದಲ್ಲಿ ಮುಂದೆ ಒದಗಿಬರಬಹುದಾದ ವಿಪತ್ತಿನ ಅರಿವಿದ್ದರೂ ದೀರ್ಘಾವಧಿ ಬಂಡವಾಳವನ್ನು ಆ ಉದ್ದಿಮೆಯಲ್ಲಿ ಹೂಡಿ, ವಿಪತ್ತನ್ನು ಸಫಲತೆಯನ್ನಾಗಿ ಪರಿವರ್ತಿಸಿ, ಯಶಸ್ಸಿಗೆ

ಅನುಗುಣವಾಗಿ ಲಾಭ ಪಡೆಯುವುದು ಈ ಸಾಹಸ ಬಂಡವಾಳದ ವಿಶೇಷ.

ಸಾಹಸ ಬಂಡವಾಳವು (i) ಉದ್ಯಮಿಯ ಪ್ರತಿಭೆಗೆ ಪೂರಕವಾಗಿ ಬಂಡವಾಳವನ್ನು ಒದಗಿಸಿ, (ii) ಉದ್ಯಮ ನಿರ್ವಹಣಾ ಕೌಶಲವನ್ನು ಒದಗಿಸಿ, (iii) ಬಂಡವಾಳ ಗಳಿಕೆಯ ರೂಪದಲ್ಲಿ ಲಾಭ ಗಳಿಸುವ ಮೂಲಕ, ಬಂಡವಾಳ ತೊಡಗಿಸುವ ಇತರ ವಿಧಿ ವಿಧಾನಗಳಿಂದ ಭಿನ್ನವಾಗಿದೆ.

ಸಾಹಸ ಬಂಡವಾಳವನ್ನು ಸಾಮಾನ್ಯವಾಗಿ 'ವಿಪತ್ತು ನಿರೀಕ್ಷಿತ ಬಂಡವಾಳ' ಎಂದೇ ಕರೆಯಲಾಗುತ್ತದೆ. ಈ ಕಾರಣದಿಂದ ಉದ್ದಿಮೆಯೊಂದರಲ್ಲಿ ಸಾಹಸ ಬಂಡವಾಳದ ರೂಪದಲ್ಲಿ ಹಣ ತೊಡಗಿಸುವ ವ್ಯಕ್ತಿ ಯಾವಾಗಲೂ ಬೆಳವಣಿಗೆಯ ಗರಿಷ್ಠ ಸಾಮರ್ಥ್ಯವಿರುವ ಉದ್ಯಮವನ್ನಾಯ್ದುಕೊಂಡು ಅಂತಹದರ ಉದ್ಯಮಿಯೊಡನೆ ಅತ್ಯಂತ ಫಲಪ್ರದ ಸಂಬಂಧವನ್ನಿಟ್ಟುಕೊಳ್ಳಲು ಬಯಸುತ್ತಾನೆ.

ದೇಶದಲ್ಲಿ ಉತ್ತಮ ತಂತ್ರಜ್ಞಾನದ ಬೆಳವಣಿಗೆ, ತಂತ್ರಜ್ಞಾನ ಕ್ಷೇತ್ರದ ನವಕಲ್ಪನೆಗಳನ್ನು ಕಾರ್ಯರೂಪಕ್ಕಿಳಿಸುವ ಆವಶ್ಯಕತೆಯ ಅರಿವು ಹಾಗೂ ಇಂತಹ ನವಪರಿಕಲ್ಪನೆಗಳಿಂದ ಪ್ರೇರಿತವಾದ ಉದ್ಯಮಕ್ಕೆ ಬೇಕಾಗಿರುವ ಬಂಡವಾಳದ ತಿಳಿವು–'ಸಾಹಸ ಬಂಡವಾಳ'ದ ಶೀಘ್ರ ಬೆಳವಣಿಗೆ ಹಾಗೂ ಜನಪ್ರಿಯತೆಗೆ ಕಾರಣವಾಗಿದೆ.

### ಸಾಹಸ ಬಂಡವಾಳದ ಉಗಮ

**ಅಮೆರಿಕೆಯಲ್ಲಿ ಸಾಹಸಬಂಡವಾಳದ ಆರಂಭ:** ಅಮೆರಿಕೆಗೆ ಕೊಲಂಬಸ್ ಕೈಗೊಂಡ ಪ್ರಖ್ಯಾತ ಯಾನ, ಇನ್ನೂ ಹೆಚ್ಚು ಐಹಿಕ ಸ್ತರದಲ್ಲಿ ಜನರಲ್ ಮೋಟಾರ್ಸ್ ಕಂಪನಿಯಲ್ಲಿ ಡೂಪಾಂಟ್‌ರ ಆರಂಭಿಕ ಬಂಡವಾಳ ಹೂಡಿಕೆ ಸಹ ಒಂದು ತೆರನಾದ ಸಾಹಸ ಬಂಡವಾಳ ಹೂಡಿಕೆಯೆ. ಆದರೆ ಈ ಬಂಡವಾಳ ಹೂಡಿಕೆಯ ಪ್ರಯೋಗಗಳು ಇಂದಿನ 'ಸಾಹಸ ಬಂಡವಾಳ'ದ ಕಲ್ಪನೆಗಿಂತ ವಿಭಿನ್ನ. ಬೋಸ್ಟನ್‌ನಲ್ಲಿನ ಹಾರ್ವರ್ಡ್ ವ್ಯವಹಾರ ಶಾಲೆಯ ಜನರಲ್ ಜಾರ್ಜ ಡೋರಿಯಟ್‌ರು 1946ರಲ್ಲಿ ಪ್ರಾರಂಭಿಸಿದ 'ಅಮೆರಿಕೆಯ ಸಂಶೋಧನೆ ಮತ್ತು ಅಭಿವೃದ್ಧಿ ನಿಗಮ'ದ ಆರಂಭವೇ ಇಂದಿನ ಸಾಹಸ ಬಂಡವಾಳದ ನವಕಲ್ಪನೆಯ ಮೂಲವೆಂದು ಗುರುತಿಸಲಾಗಿದೆ. ಡೋರಿಯಟ್‌ರನ್ನು ಅಮೆರಿಕೆಯ ಸಾಹಸ ಬಂಡವಾಳ ಉದ್ದಿಮೆಯ ಜನಕನೆಂದು ಪರಿಗಣಿಸಲಾಗಿದೆ.

ಹೊಸ ಉದ್ದಿಮೆ, ಅದರಲ್ಲೂ ನವತಾಂತ್ರಿಕತೆಯನ್ನು ಅಳವಡಿಸಿಕೊಂಡು ಆರಂಭವಾಗುತ್ತಿರುವ ಉದ್ದಿಮೆಗೆ ಇತರ ರೀತಿಯ ಸಾಲಗಳಿಗಿಂತ ಅಧಿಕವಾಗಿ ಬಂಡವಾಳ ರೂಪದಲ್ಲಿನ ಹಣದ ಆವಶ್ಯಕತೆಯನ್ನು ಡೋರಿಯಟ್ ಮನಗಂಡರು. ಪೂರ್ವಾನುಭವದ ಕೊರತೆಯಿರುವ ಇಂತಹ ನವಉದ್ದಿಮೆಗಳಲ್ಲಿ ಜನಸಾಮಾನ್ಯರಿಂದ ಹಾಗೂ ಹಣಕಾಸು ಸಂಸ್ಥೆಗಳಿಂದ ಬಂಡವಾಳ ಹೂಡಿಕೆ ಮರೀಚಿಕೆಯೇ ಆಗಿದ್ದ ದಿನಗಳವು. ಜನರಲ್ ಡೋರಿಯಟ್‌ರ 'ಅಮೆರಿಕೆಯ ಸಂಶೋಧನೆ ಮತ್ತು ಅಭಿವೃದ್ಧಿ ನಿಗಮ' ಇಂತಹ ನವ ಉದ್ದಿಮೆಗಳಲ್ಲಿ ನೇರವಾಗಿ ಹಣ ತೊಡಗಿಸಲು ಇಷ್ಟಪಡದ ಹಣ ಹೂಡಿಕಾ ಸಂಸ್ಥೆಗಳಿಂದ ಹಣವನ್ನು ಪಡೆದು, ಹೀಗೆ ಪಡೆದ ಹಣವನ್ನು ನವ ಉದ್ಯಮಿಗಳಿಗೆ ಬಂಡವಾಳವಾಗಿ ನೀಡಿದ ಮೊದಲ ಸಾಹಸ ಬಂಡವಾಳ ನಿಧಿ.

ಡೋರಿಯಟ್‌ರ ಈ ನಿಗಮದ ಅತ್ಯಂತ ಫಲಪ್ರದ ಬಂಡವಾಳ ಹೂಡಿಕೆಯೆಂದರೆ ಡಿಜಿಟಲ್ ಎಕ್ವಿಪ್‌ಮೆಂಟ್ ಕಾರ್ಪೊರೇಷನ್‌ನಲ್ಲಿ ತೊಡಗಿಸಿದ ಆರು ದಶಲಕ್ಷ ಅಮೆರಿಕನ್ ಡಾಲರ್‌ಗಳು. ಈ ಆರು ದಶಲಕ್ಷ ಅಮೆರಿಕನ್ ಡಾಲರುಗಳ ಹಣ ಹೂಡಿಕೆ, ನಿಗಮಕ್ಕೆ ೪೦೦ ದಶಲಕ್ಷ ಡಾಲರ್‌ಗಳ ಗಳಿಕೆಯನ್ನು ತಂದುಕೊಟ್ಟಿತು. ಈ ರೀತಿಯಾಗಿ ಡೋರಿಯಟ್‌ರ 'ಅಮೆರಿಕೆಯ ಸಂಶೋಧನೆ ಮತ್ತು ಅಭಿವೃದ್ಧಿ ನಿಗಮ' ಹೊಸ, ಸಾಮರ್ಥ್ಯಪೂರ್ಣ ಉದ್ದಿಮೆಗಳಲ್ಲಿ ಹಣ ಹೂಡಲಿಚ್ಛಿಸುವವರಿಗಾಗಿ ರೂಪಗೊಂಡ ಮೊದಲ ಹಣಕಾಸು ಮಧ್ಯವರ್ತಿ ಸಂಸ್ಥೆ.

70 ಹಾಗೂ 80ರ ದಶಕಗಳಲ್ಲಿ ಅನೇಕ ಏರಿಳಿತಗಳನ್ನು ಕಂಡ ಅಮೆರಿಕೆಯ ಸಾಹಸ ಬಂಡವಾಳ ಉದ್ದಿಮೆ 1992ರ ವೇಳೆಗೆ ಸುಮಾರು 33 ಶತಕೋಟಿ ಡಾಲರ್‌ಗೂ ಮಿಗಿಲಾದ ಹಣ ಹೂಡಿಕಯನ್ನು ಹೊಂದಿದ್ದು, 650 ಸಂಸ್ಥೆಗಳು ಸಾಹಸ ಬಂಡವಾಳ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿದ್ದವು.

### ಬ್ರಿಟನ್ನಿನಲ್ಲಿ ಸಾಹಸ ಬಂಡವಾಳದ ಬೆಳವಣಿಗೆ

ಭಾರತ ಹಾಗೂ ಇತರ ದೇಶಗಳಿಗೆ 15ನೇ ಶತಮಾನದಲ್ಲಿ ಕೈಗೊಂಡ ಸಾಹಸಯಾನಗಳಿಗೆ ಬ್ರಿಟನ್ನಿನ ಅನೇಕ ಶ್ರೀಮಂತರು ಹಣ ತೊಡಗಿಸಿದ್ದನ್ನು ಬ್ರಿಟನ್ನಿನಲ್ಲಿನ ಸಾಹಸ ಬಂಡವಾಳದ ಆರಂಭವೆಂದು ಪ್ರತಿಪಾದಿಸುವುದುಟು. ಆದರೆ ಇಂತಹ ಸಾಹಸ ಯಾನಗಳಲ್ಲಿ ತೊಡಗಿಸಿದ ಹಣ ಇಂದಿನ ಸಾಹಸ ಬಂಡವಾಳದ ಕಲ್ಪನೆಯ ಚೌಕಟ್ಟಿನಲ್ಲಿ ಬರಲಾರದು. ಆದರೆ, ಸಣ್ಣ ಹಾಗೂ ಅಭಿವೃದ್ಧಿ ಸಾಮರ್ಥ್ಯವುಳ್ಳ, ಅಂತೆಯೇ ನಷ್ಟಸಂಭವನೀಯಕೆಯೂ ಇದ್ದ ಉದ್ದಿಮೆಗಳಿಗೆ 1930ರಲ್ಲಿ ಬಂಡವಾಳ ನೀಡಿದ ಚಾರ್ಟರ್ ಹೌಸ್ ಸಂಸ್ಥೆ ಈ ದಿಸೆಯಲ್ಲಿ ಹೆಜ್ಜೆಯಿಟ್ಟ ಮೊದಲ ಸಂಸ್ಥೆ ಎನ್ನಬಹುದು.

1960ರ ದಶಕದಲ್ಲಿ ಬ್ರಿಟನ್ನಿನಲ್ಲಿ ಅನೇಕ ಸಾಹಸ ಬಂದವಾಳ ಸಂಸ್ಥೆಗಳು ಉದಯಿಸಿದರೂ ಅವೆಲ್ಲವೂ ಕಾರಣಾಂತರಗಳಿಂದ ಅಸ್ತಂಗತಗೊಂಡು 1975ರ ವೇಳೆಗೆ ಕೇವಲ 10 ಸಂಸ್ಥೆಗಳು ಈ ಕ್ಷೇತ್ರದಲ್ಲಿ ಕಾರ್ಯನಿರತವಾಗಿದ್ದವು.

ಮತ್ತೆ 80ರ ದಶಕದಲ್ಲಿ ಪ್ರಾಬಲ್ಯಕ್ಕೆ ಬಂದ ಈ ಸಾಹಸ ಬಂಡವಾಳ ಉದ್ದಿಮೆ 1991ರ ವೇಳೆಗೆ 989 ದಶಲಕ್ಷ ಪೌಂಡ್

ಗಳನ್ನು ಬಂಡವಾಳವಾಗಿ ನೀಡಿರುವುದು ಇತ್ತೀಚಿನ ದಿನಗಳಲ್ಲಿ ಬ್ರಿಟನ್ನಿನಲ್ಲಿ ಸಾಹಸ ಬಂಡವಾಳದ ಬೆಳವಣಿಗೆಯ ಕುರುಹಾಗಿದೆ.

**ಭಾರತದಲ್ಲಿ ಸಾಹಸ ಬಂಡವಾಳ**

ಹಿಂದೆಂದೂ ಉಪಯೋಗಿಸಲಾಗಿರದ, ಪರೀಕ್ಷಿಸಲಾಗಿರದ ತಂತ್ರಜ್ಞಾನವನ್ನು ಮೊದಲ ಬಾರಿಗೆ ಕಾರ್ಯರೂಪಕ್ಕೆ ತರುತ್ತಿರುವ ಉದ್ಯಮಶೀಲವ್ಯಕ್ತಿ. ಅಥವಾ ನವ್ಯಚಿಂತನವೊಂದನ್ನು ಬಳಸಿಕೊಂಡು ಉದ್ದಿಮೆಯೊಂದನ್ನು ಆರಂಭಿಸಲಿಚ್ಛಿಸುವ ವ್ಯಕ್ತಿಗೆ, ಆ ಉದ್ದಿಮೆಗೆ ಅಗತ್ಯವಾದ ಬಂಡವಾಳವನ್ನು ಹಾಕಲು ಆತನಲ್ಲಿ ಹಣವಿಲ್ಲದ ಸಂದರ್ಭದಲ್ಲಿ, ಬಂಡವಾಳಕ್ಕಾಗಿ ಮೊರೆಹೋಗಬಹುದಾದ ಧನಾಶ್ರಯ ಸಂಸ್ಥೆಗಳೇ ಇಲ್ಲದ್ದು ನಮ್ಮ ದೇಶದಲ್ಲಿ ಇತ್ತೀಚಿನ ದಿನಗಳ ವರೆಗೆ ಇದ್ದ ಸ್ಥಿತಿ.

ನಂತರದ ದಿನಗಳಲ್ಲಿ ಇಂತಹ ಉದ್ಯಮಗಳಿಗೆ ಧನಪೋಷಣೆ ಸಿಗುವುದೇ ಆಗಿದ್ದರೂ ಅದು ಅವಧಿ ಸಾಲದ ರೂಪದಲ್ಲಿ ಮಾತ್ರವಾಗಿದ್ದು, ಬಂಡವಾಳ ರೂಪದಲ್ಲಂತೂ ಅಲ್ಲ. ಅಪರೀಕ್ಷಿತ ತಾಂತ್ರಿಕತೆಯನ್ನು ಬಳಸಿಕೊಂಡು ಉತ್ಪಾದನೆಗಿಳಿಯುವ ಉದ್ದಿಮೆಗಳಿಗಂತೂ ಅವಧಿ ಸಾಲ ಸಹ ಒಂದು ಕನಸೇ ಆಗಿತ್ತು.

ಇಂತಹ ಪರಿಸ್ಥಿತಿಯಲ್ಲಿ 80ರ ದಶಕದ ಕೊನೆಗೆ—ನಿಖರವಾಗಿ ಹೇಳುವುದಾದರೆ 1986–87ರಲ್ಲಿ—ಕೈಗಾರಿಕಾ ಬೆಳವಣಿಗೆಗೆ 'ಸಾಹಸ ಬಂಡವಾಳದ ಆವಶ್ಯಕತೆ'ಯನ್ನು ಮನಗಂಡ ಸರಕಾರವು ತನ್ನ ಆಯವ್ಯಯ ಪತ್ರದಲ್ಲಿ ಹೊಸ ಹಣಕಾಸು ಸೇವೆಯ ರೂಪದಲ್ಲಿ ಸಾಹಸ ಬಂಡವಾಳ ಸಂಸ್ಥೆಗಳನ್ನು ಆರಂಭಿಸುವ ಆವಶ್ಯಕತೆಯನ್ನು ಪ್ರತಿಪಾದಿಸಿ 'ಸಾಹಸ ಬಂಡವಾಳ'ದ ಉಗಮಕ್ಕೆ ನಾಂದಿ ಹಾಡಿತು.

ತದನಂತರ, 1998-99ರಲ್ಲಿ ಹಣಕಾಸು ವ್ಯವಸ್ಥೆ ಹೊಸ ಯೋಜನೆ ಯೊಂದನ್ನು ರೂಪಿಸಿ, ಆ ಯೋಜನೆಯ ಅನ್ವಯ ಸಾಹಸ ಬಂಡವಾಳ ಸಂಸ್ಥೆಗಳು ನವ ಉದ್ದಿಮೆಗಳಲ್ಲಿ ತೊಡಗಿಸುವ ಬಂಡವಾಳದಿಂದ ಬರಬಹುದಾದ ಬಂಡವಾಳ ಗಳಿಗೆಯ ಮೇಲೆ ಕೆಲವು ರಿಯಾಯಿತಿಗಳನ್ನು ಘೋಷಿಸಿ ಸಾಹಸ ಬಂಡವಾಳ ಸಂಸ್ಥೆಗಳ ಬೆಳವಣಿಗೆಯನ್ನು ಪ್ರೋತ್ಸಾಹಿಸಿತು.

ದೇಶದಲ್ಲಿ ಮುಂದೆ ಆಗಬಹುದಾದ ತಾಂತ್ರಿಕ ಕ್ರಾಂತಿಯ ಅರಿವು ಹಾಗೂ ಸಾಹಸ ಬಂಡವಾಳರೂಪದ ಧನಪೋಷಣೆಯಿಂದ ಸಾಧ್ಯವಿರುವ ಉತ್ತೇಜನಕಾರಿ ಪ್ರತಿಫಲದ ತಿಳಿವು ಇತ್ತೀಚಿನ ದಿನಗಳಲ್ಲಿ ಸಾಹಸ ಬಂಡವಾಳ ಸಂಸ್ಥೆಗಳ ಶೀಘ್ರ ಬೆಳವಣಿಗೆಗೆ ಕಾರಣವಾಗಿದೆ.

ಅನೇಕ ಹಣಕಾಸು ಸಂಸ್ಥೆಗಳು ಹಾಗೂ ಬ್ಯಾಂಕುಗಳು ಸಾಹಸ ಬಂಡವಾಳ ಕ್ಷೇತ್ರಕ್ಕೆ ಕಾಲಿಟ್ಟಿದ್ದು. ಅಖಿಲ ಭಾರತ ಹಣಕಾಸು ಅಭಿವೃದ್ಧಿ ಸಂಸ್ಥೆಗಳು, ರಾಜ್ಯ ಹಣಕಾಸು ಅಭಿವೃದ್ಧಿ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು ಹಾಗೂ ಖಾಸಗೀ ಕ್ಷೇತ್ರದ ಕಂಪೆನಿಗಳು ಸಾಹಸ ಬಂಡವಾಳ ಸಂಸ್ಥೆಗಳ ಪ್ರವರ್ತಕ ಸಂಸ್ಥೆಗಳಾಗಿವೆ. ಭಾರತದಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವು ಮುಖ್ಯ ಸಾಹಸ ಬಂಡವಾಳ ಸಂಸ್ಥೆಗಳೆಂದರೆ :

1 ಭಾರತೀಯ ತಂತ್ರಜ್ಞಾನ ಅಭಿವೃದ್ಧಿ ಮತ್ತು ಮಾಹಿತಿ ಕಂಪನಿ ನಿಯಮಿತ ಅಖಿಲ ಭಾರತ ಹಣಕಾಸು ಪ್ರವರ್ತಕರು
2 ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕಿನ ಸಾಹಸ ಬಂಡವಾಳ ವಿಭಾಗ ಅಭಿವೃದ್ಧಿ ಸಂಸ್ಥೆಗಳು
3 ರಿಸ್ಕ್ ಬಂಡವಾಳ ಹಾಗೂ ತಂತ್ರಜ್ಞಾನ ಹಣಕಾಸು ನಿಗಮ
4 ಗುಜರಾತ್ ಸಾಹಸ ಹಣಕಾಸು ನಿಯಮಿತ
5 ಎಪಿಐಡಿಸಿ ಸಾಹಸ ಬಂಡವಾಳ ನಿಯಮಿತ
6 ಕ್ಯಾನ್ ಬ್ಯಾಂಕ್ ಸಾಹಸ ಬಂಡವಾಳ ನಿಧಿ
7 ಸ್ಟೇಟ್ ಬ್ಯಾಂಕ್ ಸಾಹಸ ಬಂಡವಾಳ ನಿಧಿ
8 ಗ್ರಿಂಡ್ಲೇಸ್ ಬ್ಯಾಂಕ್ ಸಾಹಸ ಬಂಡವಾಳ ನಿಧಿ
9 20ನೇ ಶತಮಾನದ ಸಾಹಸ ಬಂಡವಾಳ ನಿಗಮ
10 ಇಂಡಸ್ ಸಾಹಸ ಬಂಡವಾಳ ನಿಧಿ
11 ಸಾಹಸ ಬಂಡವಾಳ ಸಾಲ ನಿಧಿ

ಇವುಗಳ ಪೈಕಿ ಮೊದಲ ಮೂರನ್ನು ಅಖಿಲ ಭಾರತ ಅಭಿವೃದ್ಧಿ ಹಣಕಾಸು ಸಂಸ್ಥೆಗಳು, 4 ಮತ್ತು 5ನೆಯದನ್ನು ರಾಜ್ಯ ಅಭಿವೃದ್ಧಿ ಹಣಕಾಸು ಸಂಸ್ಥೆಗಳು, 6, 7 ಮತ್ತು 8ನೆಯದನ್ನು ವಾಣಿಜ್ಯ ಬ್ಯಾಂಕುಗಳು, ಕೊನೆಯ ಮೂರನ್ನು ಖಾಸಗಿ ವಲಯ ಕಂಪೆನಿಗಳು ಪ್ರವರ್ತಿಸಿವೆ.

**ಸಾಹಸ ಬಂಡವಾಳ ಪಡೆಯಲು ಅರ್ಹತೆಯಿರುವ ಉದ್ದಿಮೆಗಳು**

(ಅ) ವಾಣಿಜ್ಯ ಮಟ್ಟದಲ್ಲಿ ಉಪಯೋಗಿಸಬಹುದಾದ ಹೊಸ ವಿಧಾನ ಅಥವಾ ಹೊಸ ಉತ್ಪನ್ನದ ಆವಿಷ್ಕಾರಕ್ಕೆ
(ಆ) ತಾಂತ್ರಿಕ ಉನ್ನತಿಯಿಂದ ಕಚ್ಚಾವಸ್ತುಗಳ ಉಪಯೋಗದಲ್ಲಿ ಹಾಗೂ ತಯಾರಿಕಾ ವೆಚ್ಚದಲ್ಲಿ ಕಡಿತ, ಅಂತ-ರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧಿಸುವ ಸಾಮರ್ಥ್ಯ, ಇಂಧನ ಉಳಿತಾಯ ನವೀನ ದೇಶೀಯ ತಂತ್ರಜ್ಞಾನದ ಸೃಷ್ಟಿಯಂತಹ ಕಾರ್ಯಗಳಿಗೆ
(ಇ) ಆಯಾತ ತಂತ್ರಜ್ಞಾನವನ್ನು ಭಾರತೀಯ ಸ್ಥಿತಿಗೆ ಅಳವಡಿಸುವ ದೇಶೀಯ ಪ್ರಯತ್ನ
(ಈ) ಪ್ರಾಯೋಗಿಕ ಮಟ್ಟದಲ್ಲಿ ಫಲಪ್ರದವಾದ, ಅಂಗೀಕೃತ ಸಂಶೋಧನಾ ಕೇಂದ್ರ ಅಥವಾ ವಿಶ್ವವಿದ್ಯಾಲಯದಿಂದ ಪರೀಕ್ಷಿತ ತಂತ್ರಜ್ಞಾನದ ಲಾಭವನ್ನು ವಾಣಿಜ್ಯಮಟ್ಟದಲ್ಲಿ ಪಡೆಯಲು ರೂಪಿಸಿರುವ ಯೋಜನೆ
(ಉ) ಲಾಭ ಅನಿಶ್ಚಯವಿರುವ, ಉದ್ದಿಮೆಗೆ ಬೇಕಾದ ತಂತ್ರ-ಜ್ಞಾನದ ಅಭಿವೃದ್ಧಿ ಮತ್ತು ದೀರ್ಘಪ್ರಾರಂಭಿಕ ಅವಧಿಯ

ತಂತ್ರಜ್ಞಾನ ಅಭಿವೃದ್ಧಿ ಯೋಜನೆಗಳು ಸಾಹಸ ಬಂಡವಾಳವನ್ನು ಪಡೆಯಲು ಅರ್ಹ ಯೋಜನೆಗಳಾಗುತ್ತವೆ.

### ಸಾಹಸ ಬಂಡವಾಳದಲ್ಲಿ ಧನ ಪೋಷಣೆಯ ಸ್ತರಗಳು

ಕ್ಷಿಪ್ರ ಬೆಳವಣಿಗೆಯ ಸಾಮರ್ಥ್ಯವುಳ್ಳ ಕಂಪೆನಿಗಳ ಮೊದಲ ಹಂತಗಳಲ್ಲಿ ಸಾಹಸ ಬಂಡವಾಳ ಸಂಸ್ಥೆಗಳು ಉದ್ದಿಮೆಗಳಿಗೆ ಸಹಾಯಹಸ್ತವನ್ನೀಯುತ್ತವೆ. ಸಾಹಸ ಬಂಡವಾಳ ಸಂಸ್ಥೆಗಳಿಂದ ಹಣಹೂಡಿಕೆ ಉದ್ದಿಮೆಯ ಈ ಕೆಳಗೆ ಹೇಳಿರುವ ಯಾವುದೇ ಹಂತದಲ್ಲಿ ಆಗಬಹುದು :

— ಉತ್ಪನ್ನದ ಪರಿಕಲ್ಪನೆಯಿಂದ ಉತ್ಪನ್ನದ ಅಭಿವೃದ್ಧಿ ವರೆಗಿನ ಘಟ್ಟ
— ವಾಣಿಜ್ಯಮಟ್ಟದಲ್ಲಿ ಕಾರ್ಯರೂಪಕ್ಕೆ ತರುವ ಘಟ್ಟ
— ವಾಣಿಜ್ಯೀಕರಣದ ಅನಂತರದ ಘಟ್ಟ

ಈ ಮೇಲೆ ಹೇಳಿರುವ ಘಟ್ಟಗಳಲ್ಲಿ ತಾಂತ್ರಿಕ ಹಾಗೂ ಮಾರುಕಟ್ಟೆ ಅನಿಶ್ಚಯತೆ ಅತಿಯಾಗಿರುವುದರಿಂದ ಉದ್ದಿಮೆಗೆ ಸಾಹಸ ಬಂಡವಾಳದ ಅವಶ್ಯಕತೆ ಅಧಿಕವಾಗಿರುತ್ತದೆ.

ಉದ್ದಿಮೆಗೆ ವಿವಿಧ ಘಟ್ಟಗಳಲ್ಲಿ ಧನಪೋಷಣೆ ಮಾಡುವುದನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಅವುಗಳು ಯಾವುವು ಹಾಗೂ ನಿರೂಪಣೆಯೇನು ಎಂಬುದನ್ನು ಕೆಳಗೆ ವಿಶದೀಕರಿಸಲಾಗಿದೆ.

### ಬೀಜ ಬಂಡವಾಳ

ಉದ್ದಿಮೆದಾರರು ಆರಂಭಿಕ ಬಂಡವಾಳಕ್ಕೆ ಅರ್ಹತೆಯನ್ನು ಗಳಿಸಲು, ತಾವು ಆರಿಸಿಕೊಂಡಿರುವ ತಂತ್ರಜ್ಞಾನ ಕಾರ್ಯಸಾಧಕವೆಂದು ತೋರಿಸಲು ಆವಶ್ಯಕವಾದ ಹಣವನ್ನು ಬಂಡವಾಳ ರೂಪದಲ್ಲಿ ನೀಡಿದರೆ ಅಂತಹ ಬಂಡವಾಳವನ್ನು ಬೀಜ ಬಂಡವಾಳ ಎಂದು ಕರೆಯಲಾಗುವುದು.

### ಆರಂಭಿಕ ಬಂಡವಾಳ

ಉತ್ಪನ್ನದ ಅಭಿವೃದ್ಧಿಯ ತದನಂತರ ಆದರೆ ಉತ್ಪನ್ನವನ್ನು ವಾಣಿಜ್ಯೀಕರಿಸುವ ಮೊದಲು ಆವಶ್ಯಕವಿರುವ ಬಂಡವಾಳವನ್ನು ಆರಂಭಿಕ ಬಂಡವಾಳವೆನ್ನುತ್ತೇವೆ.

### ಅಭಿವೃದ್ಧಿ ಬಂಡವಾಳ

ಉದ್ದಿಮೆಗೆ ಉತ್ತಮ ಬೆಳವಣಿಗೆಯ ಸಾಮರ್ಥ್ಯವಿದ್ದು, ಅದರ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ಹೆಚ್ಚಿನ ಬೇಡಿಕೆ ಇದ್ದು, ಬ್ಯಾಂಕುಗಳಿಂದ ಪಡೆದ ದುಡಿಯುವ ಬಂಡವಾಳವು ಸಾಕಾಗದಿದ್ದಲ್ಲಿ, ಅಗತ್ಯವಿರುವ ಹೆಚ್ಚಿನ ಬಂಡವಾಳವನ್ನು ದುಡಿಯುವ ಬಂಡವಾಳದ ರೂಪದಲ್ಲಿ ತೊಡಗಿಸಲಾಗುವುದು. ಇಂತಹ ಬಂಡವಾಳವನ್ನು ವಿಸ್ತರಣ ಅಥವಾ ಅಭಿವೃದ್ಧಿ ಬಂಡವಾಳ ಎನ್ನುತ್ತಾರೆ.

### ಪರಿವರ್ತನ ಬಂಡವಾಳ

ಆವಶ್ಯಕವಾದ ಬಂಡವಾಳ ಹಾಗೂ ಸಾಮರ್ಥ್ಯವೆರಡನ್ನೂ ಹೊಂದಿದ್ದರೂ ಸೂಕ್ತ ರೀತಿಯಲ್ಲಿ ಕಾರ್ಯ ನಿರ್ವಹಿಸದಿರುವ ಸಂಸ್ಥೆಗಳನ್ನು ಖರೀದಿಸಲು ಬೇಕಾದ ಬಂಡವಾಳಕ್ಕೆ ಪರಿವರ್ತನಾ ಬಂಡವಾಳ ಎನ್ನುತ್ತಾರೆ.

ಈ ಮೇಲೆ ಹೇಳಿರುವ ಅನೇಕ ರೂಪಗಳಲ್ಲಿ ಧನಪೋಷಣೆ ಮಾಡಲು ಸಾಹಸ ಬಂಡವಾಳ ಉದ್ದಿಮೆಗೆ ಆವಶ್ಯಕವಿದೆ.

### ಧನಪೋಷಣೆಯ ವಿಧಾನಗಳು

ಭಾರತದಲ್ಲಿನ ಸಾಹಸ ಬಂಡವಾಳ ಸಂಸ್ಥೆಗಳು ತ್ರಿವಿಧವಾಗಿ ಧನಪೋಷಣೆಗೈಯ್ಯುತ್ತವೆ. ಅವುಗಳೆಂದರೆ, ಮೊದಲನೆಯದಾಗಿ ಬಂಡವಾಳ ರೂಪದಲ್ಲಿ, ಎರಡನೆಯದಾಗಿ ನಿಯಮಾಧೀನ ಸಾಲಗಳಾಗಿ ಹಾಗೂ ಮೂರನೆಯದಾಗಿ 'ವರಮಾನ ಪತ್ರ'ದ ರೂಪದಲ್ಲಿ.

ಧನಪೋಷಣೆ ಹೆಚ್ಚಾಗಿ ಬಂಡವಾಳರೂಪದಲ್ಲೇ ಆದರೂ, ಕೆಲವೊಮ್ಮೆ ಅಧಿಮಾನ ಬಂಡವಾಳ ಅಥವಾ ಪರಿವರ್ತನೀಯ ಸಾಲದ ರೂಪದಲ್ಲಿ ಸಹ ನೀಡಲಾಗುವುದು.

ಬಂಡವಾಳ ರೂಪದ ಹಣ ಹೂಡಿಕೆ, ಸಾಹಸ ಬಂಡವಾಳ ಸಂಸ್ಥೆಯ ಒಟ್ಟು ನಿಧಿಯ ಗರಿಷ್ಠ ಶೇ. 10ರಷ್ಟಕ್ಕೆ ಮತ್ತು ಯಾವ ಉದ್ದಿಮೆಯಲ್ಲಿ ಹಣ ಹೂಡುತ್ತಿದ್ದೇವೊ ಆ ಸಂಸ್ಥೆಯ ಬಂಡವಾಳದ ಶೇ. 49ಕ್ಕೆ ಸೀಮಿತವಾಗಿರಬೇಕೆಂಬ ನಿಯಮವಿದೆ. ಹೀಗೆ ಹಣ ಹೂಡಿಕೆ ನಿರ್ದಿಷ್ಟ ಉದ್ದಿಮೆಯ ಬಂಡವಾಳದ ಶೇ. 49ಕ್ಕೆ ಸೀಮಿತವಾಗಿರಬೇಕಾದ್ದರಿಂದ ಉದ್ಯಮದ ಮೇಲಿನ ಸ್ವಾಮ್ಯ ಉದ್ಯಮಶೀಲನ ಕೈಯಲ್ಲೇ ಇರುತ್ತದೆ.

ನಿಯಮಾಧೀನ ಸಾಲಗಳಿಗೆ ಶೇ. 2ರಿಂದ ಶೇ. 15ರಷ್ಟು ರಾಯಧನವನ್ನು ಉದ್ದಿಮೆ ಲಾಭಗಳಿಕೆ ಆರಂಭಿಸಿದ ಅನಂತರ ನೀಡಬೇಕಾಗುತ್ತದೆ.

ವರಮಾನ ಪತ್ರಗಳ ರೂಪದ ಧನಪೋಷಣೆಯಲ್ಲಿ ಬಂಡವಾಳ ರೂಪದ ಹಾಗೂ ನಿಯಮಾಧೀನ ಸಾಲಗಳೆರಡರ ಸಮ್ಮಿಶ್ರಣವನ್ನು ಕಾಣಬಹುದು. ಉದ್ಯಮಶೀಲನು ಪಡೆದ ಧನಪೋಷಣೆಯ ಮೇಲೆ ಬಡ್ಡಿಯನ್ನೂ ಹಾಗೂ ಮಾರಾಟ ಗಳಿಕೆಯ ಒಂದು ಸಣ್ಣ ಪಾಲನ್ನೂ ಸಹ ಕೊಡಬೇಕಾಗುತ್ತದೆ.

### ಭಾರತದಲ್ಲಿ ಸಾಹಸ ಬಂಡವಾಳ

ಭಾರತದಲ್ಲಿ ಸಾಹಸ ಬಂಡವಾಳ ಸಾಕಷ್ಟು ಬೆಳೆದು ಪ್ರಗತಿಪಥದಲ್ಲಿ ಮುಂದುವರಿಯುತ್ತಿದೆ. ಉನ್ನತ ತಂತ್ರಜ್ಞಾನವನ್ನು ಅಳವಡಿಸಿಕೊಂಡು, ನವಕಲ್ಪನೆಗಳೊಡನೆ ಆರಂಭಿಸುವ ಉದ್ದಿಮೆಗ ಧನಪೋಷಣೆ ಇದರ ಗುರಿಯಾಗಿದ್ದರೂ ಎಲ್ಲ ಸಾಹಸ ಬಂಡವಾಳ ನಿಧಿಗಳು ಉನ್ನತ ತಾಂತ್ರಿಕತೆಯನ್ನು ಉಪಯೋಗಿಸಿಕೊಂಡು ಆರಂಭಿಸಲಿರುವ ಉದ್ದಿಮೆಗೆ ಸಹಾಯವನ್ನೀಯುತ್ತಿಲ್ಲ

# ಭಾರತದಲ್ಲಿ ಸೀಗಡಿ ಕೃಷಿ

**ಎಸ್. ಆರ್. ಪರಶುರಾಮಪ್ಪ**
ಭಾರತೀಯ ಸ್ಟೇಟ್ ಬ್ಯಾಂಕ್, ಮಂಗಳೂರು ಶಾಖೆ

**ಅತ್ಯಂತ ಲಾಭದಾಯಕವೆನಿಸಿದ ಸೀಗಡಿ ಕೃಷಿಯ ಭವಿಷ್ಯ ಈಗ ತೂಗುಯ್ಯಾಲೆಯಲ್ಲಿದೆ. ಇದಕ್ಕಾಗಿ ಹಣ ನೀಡಿದ ಬ್ಯಾಂಕರುಗಳು ನಷ್ಟ ಅನುಭವಿಸಬೇಕಾದ ಪರಿಸ್ಥಿತಿ ಉಂಟಾಗಿದೆ.**

ಭಾರತೀಯ ಕೃಷಿರಂಗದ ಕ್ಷಿತಿಜದಲ್ಲಿ ಕ್ರಾಂತಿಕಾರಿ ಎನ್ನಬಹುದಾದ ಬದಲಾವಣೆಗಳು ಗೋಚರಿಸುತ್ತಿವೆ. ಇಲ್ಲಿಯವರೆಗೂ ಪ್ರಚಲಿತದಲ್ಲಿರುವ ಹೊಲ, ಗದ್ದೆ, ತೋಟ ಇತ್ಯಾದಿ ಹೆಸರುಗಳನ್ನೆಲ್ಲ ಮರೆಸುವಂಥ ಗ್ರೀನ್ ಹೌಸ್/ಅಂತೂರಿಯಂ/ಬೊನ್ಸಾಯ್ ಸಂಸ್ಕೃತಿ ಭಾರತಕ್ಕೆ ಲಗ್ಗೆಯಿಡುತ್ತಿದೆ. ಕಂಪ್ಯೂಟರ್ ನಿಯಂತ್ರಿಕ ಕೃಷಿ ಇನ್ನೇನು ಸ್ವಲ್ಪ ದಿನಗಳಲ್ಲೆ ಒಂದು ಫ್ಯಾಷನ್ನೇ ಆಗಬಹುದು.

ಈ ಎಲ್ಲ ವಿದ್ಯಮಾನಗಳು ನೆಲದ ಮೇಲೆ ಕಂಡುಬಂದರೆ, ಸಮುದ್ರಗಳಲ್ಲಿ ಹೊಸಬಗೆಯ ಅಲೆಗಳೇ ಏಳುತ್ತಿದೆ. ಪರಂಪರಾಗತ ಮೀನುಗಾರಿಕೆಯ ಬುಡವನ್ನೇ ಕಿತ್ತು ಅಲ್ಲಾಡಿಸುವಂತೆ ಬರುತ್ತಿವೆ. ಅತ್ಯಾಧುನಿಕ ಆಳಕಡಲು ಮೀನುಗಾರಿಕೆ ಹಡಗುಗಳು ಸಾಂಪ್ರದಾಯಿಕ ಮೀನುಗಾರಿಕೆಯಲ್ಲಿ ಬರಬಹುದಾದ ಉತ್ಪತ್ತಿಯ ಹಲವು ನೂರು ಪಟ್ಟು ಉತ್ಪತ್ತಿಯನ್ನು ಒಂದೇ ಪಟ್ಟಿಗೆ ಹಿಡಿದಿಡಬಲ್ಲ ಈ ಹಡಗುಗಳು ನಿರ್ದಯೆಯಿಂದ ಮೀನುಗಳ ಸಂತಾನಾಭಿವೃದ್ಧಿಗೂ ಅವಕಾಶ ಕೊಡದೆ ಅವುಗಳ ಮೊಟ್ಟೆ ಮರಿ ಎಲ್ಲವನ್ನು ಬಾಚಿಕೊಂಡು ಹಲವಾರು ಜಾತಿಯ ಮೀನುಗಳ ಸಂತತಿಗೇ ಕಂಟಕಪ್ರಾಯವಾಗಿ ಪರಿಣಮಿಸಿವೆ. ಪರಿಣಾಮ, ಕೆಲಜಾತಿಯ ಮೀನುಗಳ ಉತ್ಪತ್ತಿಯಲ್ಲಿ ಗಣನೀಯ ಕುಸಿತ ಸೀಗಡಿ ಅವುಗಳಲ್ಲೊಂದು.

**ಸೀಗಡಿ**

ನೀರಿನಲ್ಲಿ ವಾಸಿಸುವ ಕ್ರಷ್ಟೇಸಿಯನ್ ಎಂಬ ಜೀವಜಾತಿಗೆ ಸೇರಿದ ಬಿಳಿರಕ್ತದ ಈ ಪ್ರಾಣಿಗಳು ಸಾಮಾನ್ಯವಾಗಿ ಸಮುದ್ರ, ಸಮುದ್ರದ ಹಿನ್ನೀರು ಅಥವಾ ಕರಾವಳಿಗೆ ಹತ್ತಿರದ ಜಲನೆಲೆಗಳಲ್ಲಿ ವಾಸಿಸುತ್ತವೆ. ಅತ್ಯಧಿಕ ಪ್ರೊಟೀನ್‌ಯುಕ್ತ ಪ್ರಾಣಿಯೆಂದು ಹೆಸರಾದ ಸೀಗಡಿಯ ವಿಶಿಷ್ಟ ರುಚಿ ಜಗತ್ತಿನಾದ್ಯಂತ ಜನಪ್ರಿಯ. ವಿಶ್ವಾದ್ಯಂತ ಆಹಾರದ ಕ್ರಮಗಳಲ್ಲಿ ಭಾರೀ ಬದಲಾವಣೆ ಕಾಣುತ್ತಿರುವ ಈ ಸಂದರ್ಭದಲ್ಲಿ ಸೀಗಡಿಯ ಬೇಡಿಕೆ ದಿನೇದಿನೇ ಏರುತ್ತಿದ್ದು ಸೀಗಡಿ ಕೃಷಿ ಅತ್ಯಂತ ಲಾಭ ತರುವ ಉದ್ದಿಮೆಗಳಲ್ಲಿ ಒಂದಾಗಿದೆ. ಸಿಗಡಿಗಳಲ್ಲಿ (1) ಹುಲಿ ಸೀಗಡಿ, (2) ಬಿಳಿ ಸೀಗಡಿ, (3) ಬಾಳೆ ಸೀಗಡಿ, (4) ಹೂ ಸೀಗಡಿ—ಇವು ಭಾರತದಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಭೇದಗಳು.

**ಜಲಾಂತರ್ಗತ ಕೃಷಿ**

ಹೆಚ್ಚುತ್ತಿರುವ ಸಾಗರೋತ್ಪತ್ತಿ ಆಹಾರದ ಬೇಡಿಕೆಯ ಪೂರೈಕೆಗೆ ಉತ್ಪಾದನೆಯ ಹೆಚ್ಚಳದ ಆವಶ್ಯಕತೆಯಿದೆಯಷ್ಟೆ. ಈ ಮೊದಲೆ ಹೇಳಿದ ಹಾಗೆ ಸಮುದ್ರದಲ್ಲಿ ಈ ಸಾಗರೋತ್ಪತ್ತಿ ಆಹಾರ ಎಲ್ಲ ಪ್ರಭೇದಗಳಲ್ಲೂ (ಉದಾ : ಸೀಗಡಿ, ಚಿಪ್ಪುಮೀನು, ಏಡಿ, ಲಾಬ್‌ಸ್ಟರ್ ಇತ್ಯಾದಿ) ಇಳುವರಿ ದಿನೇದಿನೇ ಕಡಿಮೆಯಾಗುತ್ತಿದ್ದು, ಹೆಚ್ಚುತ್ತಿರುವ ಬೇಡಿಕೆಯ ಪೂರೈಕೆಗೆ ಇವುಗಳನ್ನು ನಿಯಂತ್ರಿತ ಸನ್ನಿವೇಶಗಳಲ್ಲಿ ಬೆಳೆಯುವುದು ಅನಿವಾರ್ಯವಾಯಿತು. ನೀರಿನ ಉಪ್ಪಿನ ಅಂಶ, ಕ್ಷಾರದ ಅಂಶ, ಆಮ್ಲಜನಕದ ಪ್ರಮಾಣ, ಇತ್ಯಾದಿಗಳನ್ನೆಲ್ಲ ಬೇಕಾದ ಪ್ರಮಾಣದಲ್ಲಿ ರೂಪಿಸಿದ, ಅದಕ್ಕೆಂದೇ ಕಟ್ಟಿಸಿದ ಕೊಳಗಳಲ್ಲಿ ಪ್ರಯೋಗಶಾಲಾ ಸನ್ನಿವೇಶಗಳಲ್ಲಿ ಉತ್ಪಾದಿಸಲ್ಪಟ್ಟ ಮರಿಗಳನ್ನು ಬಿಟ್ಟು, ಸರಿಯಾದ ಪ್ರಮಾಣದಲ್ಲಿ ಅವುಗಳಿಗೆ ಪೂರ್ವನಿರ್ಧಾರಿತ ಗುಣಾಂಶಗಳನ್ನುಳ್ಳ ಸಿದ್ಧ ಆಹಾರ ಮತ್ತು ಔಷಧಿಗಳನ್ನು ನೀಡಿ ಬೆಳೆಸುವ ವಿಧಾನವೇ ಜಲಾಂತರ್ಗತ ಕೃಷಿ ವಿಧಾನ. ಇದೊಂದು ಅತ್ಯಾಧುನಿಕ ಕೃಷಿತಂತ್ರಗಳನ್ನೊಳಗೊಂಡ ಕೃಷಿ ವಿಧಾನ. ಇದಕ್ಕೆಂದೇ ತರಬೇತಿ ಹೊಂದಿರುವ ತಜ್ಞರ ನೆರವಿನಿಂದ ಕೊಳಗಳನ್ನು ತಯಾರಿಸುವುದೇ ಅಲ್ಲದೆ ಸೂಕ್ತ ಕಾಲದಲ್ಲಿ ನೀರನ್ನು ಬದಲಾಯಿಸುತ್ತ ದಿನದಲ್ಲಿ ಹಲವಾರು ಸಲ ಕೊಳದ ನೀರಿನ ಲವಣಾಂಶ ಮತ್ತಿತರ ಗುಣಗಳನ್ನು ಕಂಡುಕೊಳ್ಳಲು ಉಪಯೋಗಿಸುವ ಉಪಕರಣಗಳ ನೆರವಿನೊಂದಿಗೆ ನೀರಿನ ಗುಣಮಟ್ಟ ಮತ್ತು ಅದರೊಳಗಿನ ಮರಿಗಳ ಬೆಳವಣಿಗೆಯನ್ನು ಪರೀಕ್ಷಿಸುವ ಕೃಷಿಕನಿಗೂ ತರಬೇತಿಯ ಆವಶ್ಯಕತೆಯಿದೆ. ಈ ಸೀಗಡಿ ಮರಿಗಳ ಪ್ರಯೋಗಶಾಲಾ ರೀತ್ಯ ಉತ್ಪತ್ತಿ ವಿಧಾನವೂ ಅತ್ಯಂತ

ರೋಚಕವಾದದ್ದು. ಸಮುದ್ರಗಳಲ್ಲಿ ವಿರಳವಾಗಿ ಸಿಗುವ ತಾಯಿ ಸೀಗಡಿಯೊಂದನ್ನು ಹಿಡಿದು ತಂದು ಪ್ರಯೋಗಶಾಲೆಯಲ್ಲಿಟ್ಟು ಅದರಿಂದ ಲಕ್ಷಾಂತರ ಮರಿಗಳನ್ನು ಉತ್ಪಾದಿಸಿ ಅವು ಪಿಎಲ್ 15–20 ಗಾತ್ರಕ್ಕೆ ಬಂದಾಗ ರೈತರಿಗೆ ಮಾರಲಾಗುತ್ತದೆ. ಈ ಮರಿ ಉತ್ಪಾದನ ಘಟಕಗಳನ್ನು 'ಹ್ಯಾಚರಿ'ಗಳೆನ್ನುತ್ತಾರೆ. ಇದರೊಂದಿಗೆ ಈ ಮರಿಗಳಿಗೆ ಸಿದ್ಧಾಹಾರ ಒದಗಿಸುವ ಉತ್ಪಾದನ ಘಟಕಗಳು, ಉಪಕರಣಗಳ ತಯಾರಿಕಾ ಘಟಕಗಳು, ಅಂತರರಾಷ್ಟ್ರೀಯ ಮಾರುಕಟ್ಟೆಗೆ ಪೂರೈಸಲು ಇರುವ ರಫ್ತುವ್ಯಾಪಾರ ಸಂಸ್ಥೆಗಳು ಹೀಗೆ ಹಲವಾರು ಆಯಾಮಗಳ ಈ ಚಟುವಟಿಕೆ ಗಮನಾರ್ಹ ಸಂಖ್ಯೆಯ ಜನರಿಗೆ ಉದ್ಯೋಗಾವಕಾಶಗಳನ್ನೂ ಒದಗಿಸಿದೆ. ಅಲ್ಲದೆ ಈ ಚಟುವಟಿಕೆ ದೇಶಕ್ಕೆ ಅಮೂಲ್ಯ ವಿದೇಶೀ ವಿನಿಮಯ ವನ್ನು ತಂದುಕೊಡುತ್ತದೆ.

ಭಾರತದಲ್ಲಿ ಸುಮಾರು 7,500 ಚದರ ಕಿಲೋಮೀಟರ್‌ಗಳ ಕರಾವಳೀ ಪ್ರದೇಶವಿದ್ದು ಅದರಲ್ಲಿ ಸುಮಾರು 14 ಲಕ್ಷ ಹೆಕ್ಟೇರ್ ಗಳಷ್ಟು ಪ್ರದೇಶ ಈ ಚಟುವಟಿಕೆಗೆ ಲಭ್ಯವಿದೆ. ಆದರೆ ಭಾರತ ಉತ್ಪಾದಿಸುವ ಆಹಾರ ಸಂಬಂಧಿ ಸಾಗರೋತ್ಪತ್ತಿ ಜಾಗತಿಕ ಸರಾಸರಿಯ ಸುಮಾರು 1/15ರಷ್ಟು ಮಾತ್ರ. ಆದ್ದರಿಂದ ಭಾರತ ಸರ್ಕಾರ ಮುಂಬರುವ ವರ್ಷಗಳಲ್ಲಿ ಸೀಗಡಿಯ ಉತ್ಪಾದನ ಚಟುವಟಿಕೆ ವ್ಯಾಪಕವಾಗಲೆಂಬ ಉದ್ದೇಶದಿಂದ ಈ ಚಟುವಟಿಕೆ ಗಳನ್ನು ಪ್ರೋತ್ಸಾಹಿಸಲು ಎಂಪಿಇಡಿಎ (ಮೇರಿನ್ ಪ್ರಾಡಕ್ಟ್ಸ್ ಎಕ್ಸ್‌ಪೋರ್ಟ್ ಡೆವಲಪ್‌ಮೆಂಟ್ ಅಥಾರಿಟಿ)ಎಂಬ ಸಂಸ್ಥೆಯನ್ನೂ ರಾಜ್ಯ ಸರ್ಕಾರ ಬಿಎಫ್‌ಡಿಎ (ಬ್ರಾಕಿಷ್ ವಾಟರ್ ಫಿಷ್ ಫಾರ್ಮರ್ಸ್ ಡೆವೆಲಪ್‌ಮೆಂಟ್ ಏಜೆನ್ಸಿ) ಎಂಬ ಸಂಸ್ಥೆಯನ್ನೂ ರೂಪಿಸಿವೆ. ಅಷ್ಟೇ ಅಲ್ಲ. ಈ ಚಟುವಟಿಕೆಗಳಿಗಿಳಿಯುವ ರೈತರಿಗೆ ಸಬ್ಸಿಡಿಯನ್ನೂ (ಸಹಾಯಧನ) ನೀಡುತ್ತಿವೆ. ಸರ್ಕಾರದ ಗುರಿ: ಉಪಯುಕ್ತ ಜಾಗದ ಶೇ. 14ರಷ್ಟಾದರೂ ಬಳಕೆಯಾಗಿ ಕಡಿಮೆ ಯೆಂದರೆ ವರ್ಷಕ್ಕೆ 145,000 ಎಂಟಿ(ಹಣ ಮೌಲ್ಯ ರೂ. 2330 ಕೋಟಿ)ಗಳಷ್ಟಾದರೂ ಉತ್ಪತ್ತಿಯಾಗಬೇಕು.

## ಸೀಗಡಿ ಕೃಷಿಯ ವಿಧಾನಗಳು

1 ಸಾಂಪ್ರದಾಯಿಕ ಪದ್ಧತಿ : ಯಾವುದೇ ಹೆಚ್ಚಿನ ತಂತ್ರಗಾರಿಕೆಯ ಬಳಕೆಯಿಲ್ಲದೆ ಸರಳವಾಗಿ ಸೀಗಡಿ ಬೆಳೆಯುವ ಪದ್ಧತಿ. ಈ ಪದ್ಧತಿಯಲ್ಲಿ ಕೊಳಗಳ ನಿರ್ಮಾಣದ ನಂತರ ಮರಿಗಳನ್ನು ಅವುಗಳ ನೈಸರ್ಗಿಕ ನೆಲೆಯಿಂದಲೇ ಸಂಗ್ರಹಿಸಿ ಬೆಳೆಸುತ್ತಾರೆ. ಮರಿಗಳ ಸಂಗ್ರಹಣೆ ಚದರ ಮೀಟರ್‌ಗೆ 5 ರಿಂದ 7 ಮರಿ ಗಳು ಮಾತ್ರ, ಉತ್ಪತ್ತಿ: ಹೆಕ್ಟೇರ್‌ಗೆ 1 ಟನ್. ಇದೇ ಪದ್ಧತಿ ಯಲ್ಲಿ ಸುಧಾರಣೆ ಮಾಡಿ ಆಧುನಿಕ ಪದ್ಧತಿಯ ಹಲವು ಅಂಶಗಳನ್ನು ಅಳವಡಿಸಿಕೊಂಡು ಸುಧಾರಿತ ಪದ್ಧತಿಯಲ್ಲಿ ಕೃಷಿ ಮಾಡಬಹುದು.

2 ಅರೆ ತೀವ್ರ ಪದ್ಧತಿ : ಇದಕ್ಕೆಂದೇ ಮುತುವರ್ಜಿಯಿಂದ ನಿರ್ಮಿಸಲ್ಪಟ್ಟ ಕೊಳಗಳಲ್ಲಿ ಚದರಮೀಟರ್ ಒಂದಕ್ಕೆ 15ರಿಂದ 20 ಮರಿಗಳನ್ನು ಬಿಟ್ಟು ನೀರಿನ ಗುಣಮಟ್ಟ, ಉಷ್ಣತಾ ಮಾನ, ಆಮ್ಲಜನಕದ ಮಟ್ಟ ಇತ್ಯಾದಿಗಳ ಮೇಲೆ ಎಚ್ಚರಿಕೆ ಯಿಂದ ನಿಗಾವಹಿಸಿ, ಸೂಕ್ತಸಮಯದಲ್ಲಿ ಸರಿಯಾದ ಪ್ರಮಾಣದ ಆಹಾರ ಕೊಟ್ಟು ಬೆಳೆಸುವುದು. ಉತ್ಪತ್ತಿ: ಹೆಕ್ಟೇರೊಂದಕ್ಕೆ 4 ರಿಂದ 5 ಟನ್‌ಗಳು.

3 ತೀವ್ರ ಪದ್ಧತಿ : ಚದರ ಮೀಟರ್‌ಗೆ 30ಕ್ಕೂ ಹೆಚ್ಚು ಮರಿ ಗಳಂತೆ ಬಿಟ್ಟು ಅತ್ಯಂತ ಹೆಚ್ಚಿನ ಎಚ್ಚರಿಕೆಯಿಂದ ಕೊಳದ ಅಪೇಕ್ಷಿತ ಸ್ಥಿತಿಯನ್ನು ಕಾಪಾಡಿಕೊಂಡು ಬರಬೇಕು. ಉತ್ಪತ್ತಿ: ಹೆಕ್ಟೇರೊಂದಕ್ಕೆ 10 ರಿಂದ 20 ಟನ್. ಹೆಚ್ಚು ಲಾಭಕಾರಿಯಾಗಿರುವಂತೆಯೇ ಅತಿ ನಷ್ಟಸಂಭಾವ್ಯತೆಯಿರುವ ಪದ್ಧತಿ.

ಚಿನ್ನದ ಮೊಟ್ಟೆಯನ್ನಿಡುವ ಕೋಳಿಯನ್ನೇ ಕುಯ್ಯುವುದು ಬಹುಶಃ ಮನುಷ್ಯನ ಜಾಯಮಾನವೋ ಏನೋ. ಅತ್ಯಧಿಕ ಲಾಭ ಗಳಿಸುವ ದುರಾಶೆಯಿಂದ ಕಳೆದ ಎರಡು ವರ್ಷಗಳಲ್ಲಿ ಇಡೀ ಪೂರ್ವ ಕರಾವಳಿಯ ಬಹುತೇಕ ರೈತರು ಹೆಚ್ಚು ಹೆಚ್ಚು ಸಿಗಡಿ ಮರಿಗಳನ್ನು ಬೆಳೆಸಲು ಪ್ರಯತ್ನಿಸಿ ಅರೆ ತೀವ್ರ ಮತ್ತು ತೀವ್ರ ಪದ್ಧತಿಗಳನ್ನು ಅನುಸರಿಸತೊಡಗಿದರು. ಪರಿಣಾಮ : ಇಡೀ ಪೂರ್ವ ಕರಾವಳಿಯಲ್ಲಿ ಈ ಚಟುವಟಿಕೆ ಹಿಂದೆಂದೂ ಕಾಣದಷ್ಟು ನಷ್ಟವನ್ನನುಭವಿಸಿತು. ದೇಶದ ಅತಿ ದೊಡ್ಡ ಸಿಗಡಿ ಕೃಷಿ ಸಂಸ್ಥೆ ಗಳೆಂದು ಹೆಸರು ಮಾಡಿದ್ದ ರ‍್ಯಾಂಕ್ ಅಕ್ವಾ ಮತ್ತಿತರ ಕಂಪನಿ ಗಳಿಗೆ ಕೋಟಿಗಟ್ಟಲೆ ನಷ್ಟವಾಯಿತು. ಕಳೆದ ವರ್ಷ ಕರ್ನಾಟಕದ ಕುಮಟಾ, ಹೊನ್ನಾವರ ಇತ್ಯಾದಿ ಸ್ಥಳಗಳಲ್ಲೂ ಇದೇ ಪರಿಸ್ಥಿತಿ. ಇದನ್ನು ಉಚ್ಚ ತಂತ್ರಜ್ಞಾನ ಕೃಷಿಯ ಇತಿಹಾಸದಲ್ಲೇ ಸಂಭವಿಸಿದ ಅತ್ಯಂತ ದೊಡ್ಡ ಆರ್ಥಿಕ ದುರಂತ ಎಂದು ಪರಿಗಣಿಸಬಹುದು. ಸಾವಿರಾರು ರೈತರು ಕೋಟಿಗಟ್ಟಲೆ ಹಣ ಕಳೆದುಕೊಂಡದ್ದಷ್ಟೇ ಅಲ್ಲ, ತಮ್ಮ ಸ್ವಾರ್ಥದ ದೆಸೆಯಿಂದಾಗಿ ಸೀಗಡಿ ವೈರಾಣುಗಳು ಹಲವಾರು ಕಡೆ ಹರಡಲು ಬಿಟ್ಟು ಲಕ್ಷಗಟ್ಟಲೆ ಹೆಕ್ಟೇರ್ ಜಾಗ ಅನುಪಯುಕ್ತವಾಗುವಂತಾಯಿತು. ಈ ಕೊಳಗಳಿಗೆ ಬಿಟ್ಟ ರಾಸಾಯನಿಕಗಳಿಂದಾಗಿ ಪರಿಸರಮಾಲಿನ್ಯ ಅತ್ಯಧಿಕವಾಗಿ ಹರಡಿ ಹಲವಾರು ದುಷ್ಪರಿಣಾಮಗಳಿಗೂ ಕಾರಣವಾಯಿತು. ಇದೆಲ್ಲದರ ಪರಿಣಾಮವಾಗಿ ಭಾರತೀಯ ಸುಪ್ರೀಂ ಕೋರ್ಟು ತನ್ನ ಅಂತಿಮ ತೀರ್ಪು ಹೊರಬರುವವರೆಗೆ ಪೂರ್ವಾನುಮತಿ ಇಲ್ಲದೆ ಯಾರೂ ಸೀಗಡಿ ಕೃಷಿ ಕೈಗೊಳ್ಳಬಾರದೆಂದು ಆದೇಶವೀಯಬೇಕಾಯಿತು.

## ಬ್ಯಾಂಕರುಗಳ ದ್ವಂದ್ವ

ಈ ಹಿನ್ನೆಲೆಯಲ್ಲಿ ಜಲಾಂತರ್ಗತ ಕೃಷಿ ವಿಧಾನಕ್ಕೆ ಕೋಟಿ ಗಟ್ಟಲೆ ಸಾಲ ಕೊಟ್ಟ ಹಲವಾರು ಬ್ಯಾಂಕುಗಳು ಇಂದು ಆ ಎಲ್ಲ

ಸಾಲಗಳನ್ನೂ ಅನುತ್ಪಾದಕ ಎಂದು ವರ್ಗೀಕರಿಸಬೇಕಾದ ಸಂದರ್ಭ ಒದಗಿ ಬಂದಿದೆ. ಪೂರ್ವ ಕರಾವಳಿ ಮತ್ತು ಕರ್ನಾಟಕದ ಪಶ್ಚಿಮ ಕರಾವಳಿಯ ಹಲವಾರು ಚಟುವಟಿಕೆಗಳಿಗೆ ನೀಡಿದ ಹಣದ ಬಡ್ಡಿ ಇರಲಿ, ಅಸಲೂ ಅನುಮಾನಾಸ್ಪದವಾಗಬಹುದಾದ ಸಂದಿಗ್ಧ ಪರಿಸ್ಥಿತಿಯಿದೆ. ತೀವ್ರವಾಗಿ ಹಬ್ಬಿದ ಹಳದಿ ಜ್ವರ ವೈರಾಣುಗಳ ಹಾವಳಿಯಿಂದಾಗಿ ಅಲ್ಲಿಯ ಬೆಳೆಗಾರರು 'ಬೆಳೆ ರಜೆ' ಕೊಡುವುದು ಅನಿವಾರ್ಯವಾಯಿತು. ಅಲ್ಲದೆ ಹೊಸ ಬೆಳೆಗಾರರಿಗೆ ಸಾಲ ಕೊಡಲು ಸುಪ್ರೀಂ ಕೋರ್ಟಿನ ಹಲ ನಿಬಂಧನೆಗಳನ್ನು ಅನುಸರಿಸ ಬೇಕಾದ ಕಷ್ಟಕರ ಪರಿಸ್ಥಿತಿ. ಅನುಸರಿಸಿದರೂ ಈ ಉದ್ದಿಮೆಗೆ ಇರುವ ತೀವ್ರ ಹಾನಿಸಂಭವನೀಯ ಎಂಬ ಹಣೆಪಟ್ಟಿ. ಒಮ್ಮೆ ಈ ಚಟುವಟಿಕೆಗೆ ಒಳಪಟ್ಟ ಭೂಮಿ ಕೆಲಕಾಲಕ್ಕಾದರೂ ಅನುಪಯುಕ್ತವಾಗುತ್ತದೆ. ಈ ಎಲ್ಲ ದೃಷ್ಟಿಯಿಂದ ಬ್ಯಾಂಕುಗಳಿಗೆ ತಮ್ಮ ನಿಯಂತ್ರಣಾಧಿಕಾರಿಗಳಿಂದ ಜಲಾಂತರ್ಗತ ಕೃಷಿ ವಿಧಾನಕ್ಕೆ ಹಣಕಾಸು ನೀಡುವ ವಿಷಯದಲ್ಲಿ ನಿಧಾನ ಧೋರಣೆ ಅನುಸರಿಸಲು ತಿಳಿಸಲಾಗಿದೆ. ಕೋಟಿಗಟ್ಟಲೆ ಹಣ ಹೂಡಿಕೆಯ ಆವಶ್ಯಕತೆ ಇರುವ ಈ ಚಟುವಟಿಕೆಯ ಪ್ರಸಕ್ತ ಸನ್ನಿವೇಶದಲ್ಲಿ ಇದು ಸೂಕ್ತ ಎಂದು ಕಂಡುಬರಬಹುದೇನೋ ನಿಜ. ಆದರೆ ಇದು ರಾಷ್ಟ್ರೀಯ ಗುರಿಯ ಮೂಲತತ್ವಕ್ಕೆ ವಿರುದ್ಧವಾದುದು. ಬ್ಯಾಂಕ್ ಸಾಲ ಒದಗಿಬರದಿದ್ದರೆ ಈ ಚಟುವಟಿಕೆಯ ಮೂಲಕ್ಕೇ ಪೆಟ್ಟು ಬಿದ್ದಂತಾಗಿ ರಾಷ್ಟ್ರೀಯ ಆದಾಯಕ್ಕೆ ತೀವ್ರ ಹೊಡೆತ ಬೀಳ ಬಹುದು. ತನ್ಮೂಲಕ ಅಮೂಲ್ಯ ವಿದೇಶಿ ವಿನಿಮಯವೂ ಬರದಂತಾಗಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಭಾರತದ ಸ್ಥಿತಿ ಇನ್ನೂ ಗೌಣವಾಗಬಹುದು. ಈ ಉದ್ದಿಮೆಯನ್ನವ ಲಂಬಿಸಿದ ಹಲವಾರು ಜನಗಳ ಉದ್ಯೋಗಕ್ಕೂ ಸಂಚಕಾರ ಬರಬಹುದು.

ಭಾರತದಲ್ಲಿ ಸೀಗಡಿ ಕೃಷಿಯ ಭವಿಷ್ಯ ಸದ್ಯಕ್ಕಂತೂ ಡೋಲಾಯ ಮಾನ. ಸುಪ್ರೀಂ ಕೋರ್ಟು ನೀಡಬಹುದಾದ ತೀರ್ಪು, ಪ್ರಮುಖ ಸೀಗಡಿ ಬೆಳೆಗಾರರು ತೆಗೆದುಕೊಳ್ಳುವ ನಿರ್ಧಾರ, ರೋಗತಡೆ ಮತ್ತು ಉತ್ಪತ್ತಿ ವೃದ್ಧಿಗೆ ಶ್ರಮಿಸುವ ತಜ್ಞರು, ರಫ್ತುದಾರರು ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸೀಗಡಿಯ ಬೆಲೆ ಇತ್ಯಾದಿಗಳ ನಡುವೆ ಅವಲಂಬಿಸಿರುವ ಈ ಉದ್ದಿಮೆ ಬೇಗ ಚೇತರಿಸಿಕೊಂಡಷ್ಟೂ ಒಳ್ಳೆಯದು. ●



# ಸಾಹಸ ಬಂಡವಾಳ

[12ನೇ ಪುಟದಿಂದ ಮುಂದುವರಿದಿದೆ[

ಭಾರತೀಯ ಸಾಹಸ ಬಂಡವಾಳ ಸಂಘದ ಅಂಕಿ-ಅಂಶಗಳ ಪ್ರಕಾರ ಈ ಸಂಘದ ಸದಸ್ಯರು ವಿನಿಯೋಗಿಸಲು ರೂ. 64.34 ಕೋಟಿ ನಿಧಿಯನ್ನು 1994ರ ಡಿಸೆಂಬರ್‌ವರೆಗೆ ಹೊಂದಿದ್ದು ಇದರಲ್ಲಿ ರೂ. 35.45 ಕೋಟಿಯನ್ನು ಬಟವಾಡೆ ಮಾಡಲಾಗಿದೆ.

ಡಿಸೆಂಬರ್ 93ರವರೆಗೆ 13 ಸಾಹಸ ಬಂಡವಾಳ ನಿಧಿಗಳು 428 ಯೋಜನೆಗಳಿಗೆ ಬಂಡವಾಳ ನೀಡಿವೆ. ಈ ಪೈಕಿ 168 ಯೋಜನೆಗಳು ಆರಂಭಿಕ ಸ್ಥಿತಿಯಲ್ಲೂ 113 ಯೋಜನೆಗಳು ಅಂಕುರಾರ್ಪಣ ಸ್ಥಿತಿಯಲ್ಲೂ ಇದ್ದುವು. 36 ಯೋಜನೆಗಳು ಕಾರ್ಯಾರಂಭ ಮಾಡಿದ್ದವು. 101 ಯೋಜನೆಗಳು ಸಾಕಷ್ಟು ಉತ್ತಮ ಪ್ರಗತಿ ಸಾಧಿಸಿದ್ದವು ಹಾಗೂ ಏಳು ಕಂಪೆನಿಗಳು ಪರಿವರ್ತನಾಸ್ಥಿತಿಯಲ್ಲಿದ್ದವು.

1994ರಲ್ಲಿ ಸಾಂಪ್ರದಾಯಿಕ ಸಾಲ ರೂಪದಲ್ಲಿ ಕೊಡುವುದರ ಬದಲಾಗಿ, ಹೆಚ್ಚು ಬಂಡವಾಳ ರೂಪದಲ್ಲಿ ಹಣ ತೊಡಗಿಸಿದ್ದು ಸಾಹಸ ಬಂಡವಾಳ ಉದ್ದಿಮೆಯ ಒಂದು ವಿಶೇಷ. ಆದರೆ ಅಂಕು ರಾರ್ಪಣ ಘಟ್ಟಕ್ಕೆ ಹೆಚ್ಚು ಹಣ ದೊರೆಯದೆ ಆರಂಭಿಕ ಹಾಗೂ ನಂತರದ ಘಟ್ಟಗಳಿಗೆ ಹೆಚ್ಚು ಬಂಡವಾಳ ದೊರೆತದ್ದು ಶೋಚನೀಯ.

**ಪರಿಸಮಾಪ್ತಿ**

ಸಾಹಸ ಬಂಡವಾಳ ತಂತ್ರಜ್ಞಾನದ ಅಭಿವೃದ್ಧಿ, ಉದ್ಯಮ ಶೀಲತೆಯ ಬೆಳವಣಿಗೆ ಹಾಗೂ ಸೃಜನಶೀಲತೆಯನ್ನು ಬೆಳೆಸಲು ಧನಪೋಷಿಸುವ ಒಂದು ವಿಧಾನ. ಇಂತಹ ಪರಿಸರಸೃಷ್ಟಿಯಿಂದಲೇ ದೇಶದ ಭವಿಷ್ಯ ಉಜ್ವಲವಾಗಲು ಸಾಧ್ಯ. ಆದ್ದರಿಂದ ದೇಶದಲ್ಲಿ ಸಾಹಸ ಬಂಡವಾಳದ ಬೆಳವಣಿಗೆಗೆ ಸೂಕ್ತ ವಾತಾವರಣವನ್ನು ಕಲ್ಪಿಸಲು ಸರಕಾರ, ಹಣಕಾಸು ಸಂಸ್ಥೆಗಳು ಖಾಸಗೀಕ್ಷೇತ್ರ ಹಾಗೂ ಇತರ ಸಂಬಂಧಿತ ಸಂಸ್ಥೆಗಳು ಒಟ್ಟಾಗಿ ಶ್ರಮಿಸಬೇಕು. ಸಾಹಸ ಬಂಡವಾಳ ಸಂಸ್ಥೆಗಳ ಬೆಳವಣಿಗೆಗೆ ಅನುಕೂಲಕರವಾದ ನೀತಿ ನಿಯಮಗಳನ್ನೂ ತೆರಿಗೆ ವಿನಾಯಿತಿಗಳನ್ನೂ ಜಾರಿಗೆ ತರುವುದು ಆವಶ್ಯಕ. ದೇಶದ ಆರ್ಥಿಕ ಬೆಳವಣಿಗೆಯ ಅಡಿಪಾಯವಾಗಲಿರುವ ಸಾಹಸ ಬಂಡವಾಳ ಉದ್ದಿಮೆ ಅಭಿವೃದ್ಧಿಪಥದಲ್ಲಿ ಶೀಘ್ರವಾಗಿ ಸಾಗುತ್ತಿರುವುದು ದೇಶದ ಆರ್ಥಿಕ ಕ್ಷೇತ್ರಕ್ಕೆ ಒಂದು ಶುಭಸೂಚನೆ.

ಈ ಕೃಷಿಗೆ ಪ್ರೋತ್ಸಾಹ ನೀಡುವುದರ ಜೊತೆಜೊತೆಗೇ ಪರಿಸರ ಸಂರಕ್ಷಣೆಯ ಕ್ರಮಗಳನ್ನು ಕಟ್ಟುನಿಟ್ಟಾಗಿ ಜಾರಿಗ ತರಬೇಕು. ಬ್ಯಾಂಕುಗಳೂ ಈ ಎಲ್ಲ ವಿಚಾರಗಳಲ್ಲೂ ಆಸಕ್ತಿ ವಹಿಸುವಂತಾಗ ಬೇಕು. ●

# ಬ್ಯಾಂಕ್ ದಾಖಲೆಗಳು ಮತ್ತು ಮುಂಜಾಗ್ರತೆ

**ಟಿ. ಎಂ. ಎಸ್. ನಾಗೀಶ್**
ಕೃಷಿ ಅಭಿವೃದ್ಧಿ ಶಾಖೆ, ಭಾರತೀಯ ಸ್ಟೇಟ್ ಬ್ಯಾಂಕ್, ಬಳ್ಳಾರಿ

ಯಾವುದೇ ವ್ಯವಹಾರಕ್ಕೆ ಸಂಬಂಧಿಸಿದ ಸರಿಯಾದ ದಾಖಲೆಗಳನ್ನು ಬ್ಯಾಂಕು ಪಡೆದು ಕೊಳ್ಳುವುದು ಬಹಳ ಮುಖ್ಯ. ಬ್ಯಾಂಕು ದಾಖಲೆಗಳು ಅಸಮರ್ಪಕ ಅಥವಾ ಅಪೂರ್ಣ ವಾಗಿದ್ದರೆ ಬ್ಯಾಂಕು ವೃಥಾ ತೊಂದರೆಗೆ ಒಳಗಾಗಬೇಕಾಗುತ್ತದೆ.

ಇತ್ತೀಚಿಗಿನ ದಿನಗಳಲ್ಲಿ, ಪ್ರತಿಯೊಂದು ಬ್ಯಾಂಕೂ ತನ್ನದೇ ಆದ ದಾಖಲೆಗಳನ್ನು ಮುದ್ರಿಸಿದ್ದು, ಅದರ ಪರಿಣಾಮವಾಗಿ, ನಿಗದಿತ ಸಾಲ ಸೌಲಭ್ಯ ಪಡೆಯುವ ಸಾಲಗಾರರು ಸಂಬಂಧಪಟ್ಟ ಅಧಿಕಾರಿಯ ಸಮ್ಮುಖದಲ್ಲಿ ಆವಶ್ಯಕ ಮುದ್ರಿತ ಫಾರಂಗಳನ್ನು ಖಾಲಿ ಬಿಟ್ಟ ಸ್ಥಳಗಳಲ್ಲಿ ತುಂಬಿ, ಸಹಿ ಮಾಡಿ ಸಾಲಸೌಲಭ್ಯ ಪಡೆಯುತ್ತಿರುವರು. ಬಹು ಬ್ಯಾಂಕ್ ಸಾಲಸೌಲಭ್ಯದ ವ್ಯವಸ್ಥೆ ಯಲ್ಲೂ ಸಾಲಗಾರರಿಗೆ ಅನುಕೂಲವಾಗುವಂತೆ, ವ್ಯವಸ್ಥಿತ ರೀತಿಯ ದಾಖಲೆಗಳನ್ನು ಭಾರತೀಯ ಬ್ಯಾಂಗಳ ಸಂಘ ಸುತ್ತೋಲೆಯ ಮೂಲಕ ಎಲ್ಲಾ ಬ್ಯಾಂಕುಗಳಿಗೆ ಕಳುಹಿಸಿದೆ. ಎಲ್ಲಾ ವ್ಯವಸ್ಥಿತ ರೀತಿಯಲ್ಲಿ ದಾಖಲೆಗಳನ್ನು ಪಡೆಯುವ ಉದ್ದೇಶ ಹೊಂದಿದ್ದರೂ, ಸಿದ್ಧವಿರುವ ಪ್ರತಿಗಳು, ಸರಿಯಾದ ಅರ್ಜಿ ನಮೂನೆಗಳು ಲಭ್ಯವಿದ್ದರೂ, ಕೆಲವೊಂದು ಪ್ರಸಂಗಗಳಲ್ಲಿ ಪಡೆದ ದಾಖಲೆಗಳು ನ್ಯಾಯಾಲಯದಲ್ಲಿ ಅನೂರ್ಜಿತವಾಗಿ, ಪ್ರತಿವಾದಿ ಆಸ್ತಿ ಹೊಂದಿದ್ದರೂ, ಬ್ಯಾಂಕಿನ ಹಣ ಸಂಪೂರ್ಣ ವಾಗಿ ವಸೂಲು ಮಾಡಲಾಗುತ್ತಿಲ್ಲ. ಇನ್ನು ಕೆಲವು ಪ್ರಸಂಗಗಳಲ್ಲಿ ಸರಿಯಾದ ದಾಖಲೆಯನ್ನು ಸಾಲಗಾರರಿಂದ ಪಡೆದಿದ್ದರೂ, ಬ್ಯಾಂಕ್‌ಗಳು ತಮ್ಮ ಸಾಲದ ಹಣವನ್ನು ವಸೂಲಿ ಮಾಡಲು ವಿಫಲವಾಗುತ್ತವೆ.

ಈ ಎಲ್ಲಾ ಪ್ರಶ್ನೆಗಳನ್ನು ಉತ್ತರಿಸುವದಕ್ಕಿಂತ ಮುಂಚೆ ದಾಖಲೆಗಳನ್ನು ಪಡೆಯುವ ಉದ್ದೇಶ ತಿಳಿದುಕೊಳ್ಳುವ ಆವಶ್ಯ ಕತೆ ಇದೆ. ಬ್ಯಾಂಕುಗಳು ಸಾಲಗಾರರಿಂದ ಯಾತಕ್ಕಾಗಿ ದಾಖಲೆ ಗಳನ್ನು ಪಡೆಯುತ್ತವೆ ? ಈ ದಾಖಲೆಗಳನ್ನು ಪಡೆಯದಿದ್ದಲ್ಲಿ ಬ್ಯಾಂಕಿನ ಸಾಲದ ಹಣ ವಸೂಲಿ ಮಾಡಲು ಸಾಧ್ಯವಿಲ್ಲವೆ ? ಬೇರೆ ರೀತಿಯಲ್ಲಿ ಹೇಳುವುದಾದರೆ, ಬ್ಯಾಂಕುಗಳು ಯಾವಾಗಲೂ ತಮ್ಮ ಸಾಲದ ಮರುಪಾವತಿ ಪಡೆಯಬೇಕಾದರೆ ಅವಶ್ಯ ದಾಖಲೆಗಳನ್ನು ಪಡೆಯಬೇಕಾಗುವುದು. ಎಷ್ಟು ಪ್ರಸಂಗಗಳಲ್ಲಿ ಬ್ಯಾಂಕ್ ತನ್ನ ಸಾಲ ವಸೂಲಿಗೆ ನ್ಯಾಯಾಲಯದ ಮೊರೆ ಹೋಗಬೇಕಾಗುತ್ತದೆ ? ಈ ರೀತಿ ಕೋರ್ಟನ್ನು ಸಂಪರ್ಕಿಸಿದಾಗ ಬ್ಯಾಂಕ್ ದಾಖಲೆಗಳ ಬಗ್ಗೆ ಯಾವ ರೀತಿಯ ಮುಂಜಾಗರೂಕತೆ ತೆಗೆದುಕೊಳ್ಳಬೇಕು ? ಕೋರ್ಟ್‌ಗೆ ಹೋಗುವುದಕ್ಕಿಂತ ಮುಂಚೆ ತಾವು ಸಾಲ ನೀಡುವಿಕೆಯಲ್ಲಿ ಪಡೆದ ದಾಖಲೆಗಳು ಅವಧಿ ಮೀರಿವೆಯೇ ? ಸರಿಯಾಗಿ ಅರ್ಜಿ ನಮೂನೆಗಳನ್ನು, ತುಂಬಿದೆಯೆ? ಸಾಲ ಪಡೆದವರು ಸೂಕ್ತ ಸ್ಥಳಗಳಲ್ಲಿ ಸಹಿ ಮಾಡಿರುವರೇ ? ಸರಿಯಾದ ಸ್ಟಾಂಪು ಹಣ ಸರಕಾರಕ್ಕೆ ಸಲ್ಲಿಸಿದೆಯೇ? ಈ ಎಲ್ಲ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಕೋರ್ಟ್‌ಗೆ ದಾಖಲೆಗಳನ್ನು ಹಾಜರುಪಡಿಸಬೇಕು.

ಸಾಮಾನ್ಯವಾಗಿ ದಾಖಲೆಗಳು ಸರಿಯಾಗಿ ಇವೆಯೋ ಇಲ್ಲವೋ ಎನ್ನುವ ಪ್ರಶ್ನೆ ಉದ್ಭವಿಸುವುದು ಸಾಲ ಮರುಪಾವತಿಯಾಗ ದಿದ್ದಾಗ ಮತ್ತು ಸಾಲ ಕಟಬಾಕಿಯಾದಾಗ ಬ್ಯಾಂಕಿನ ಆಂತರಿಕ ಲೆಕ್ಕಪರಿಶೋಧಕರು, ಲೆಕ್ಕಪರಿಶೋಧನೆಯ ಸಮಯದಲ್ಲಿ ದಾಖಲೆ ಬಗ್ಗೆ ವರದಿ ಸಲ್ಲಿಸಿದಾಗ, ಸಂಬಂಧಪಟ್ಟ ಅಧಿಕಾರಿಗಳು ಸೂಕ್ತ ಕ್ರಮ ಕೈಗೊಳ್ಳಲು ಮುಂದಾಗಬೇಕು. ಬ್ಯಾಂಕಿನ ಅಧಿಕಾರಿಗಳು ಸಾಲ ವಸೂಲಿಯ ಎಲ್ಲ ಪ್ರಯತ್ನಗಳು ವಿಫಲವಾದಾಗ ಬ್ಯಾಂಕಿನ ಬಾಕಿ ಹಣವನ್ನು ವಸೂಲಿ ಮಾಡಲು ಕಾಯ್ದೆ ಕ್ರಮ ಆರಂಭ ವಾದಾಗ, ಅಥವಾ ಕಾನೂನು ಪ್ರಕಾರ ಬಾಕಿದಾರನಿಗೆ ನೋಟೀಸು ಸಲ್ಲಿಸುವುದಕ್ಕಿಂತ ಮುಂಚೆ, ಬ್ಯಾಂಕ್ ದಾಖಲೆಗಳ ಬಗ್ಗೆ ಸರ್ವ ಸಾಮಾನ್ಯವಾಗಿ ಬ್ಯಾಂಕ್ ಗಮನಹರಿಸುವುದು. ಎಲ್ಲ ವಿಧದಲ್ಲಿ ಪ್ರಯತ್ನಿಸಿ ಬ್ಯಾಂಕ್ ಸಾಲ ವಸೂಲಿಯಲ್ಲಿ ವಿಫಲವಾದಾಗ ಕೋರ್ಟ್‌ನ ಕಟ್ಟೆ ಹತ್ತುವುದು, ಅದಕ್ಕೆ ಮುಂಚೆ ದಾಖಲೆಗಳಿಗೆ ಆದ್ಯತೆ ನೀಡುವುದು ಎಂದಂತಾಯಿತು. ಸಂಬಂಧಪಟ್ಟ ಅಧಿಕಾರಿ ನ್ಯಾಯಾಲಯದಲ್ಲಿ ಸಾಲದ ದಾಖಲೆಗಳನ್ನು ಹಾಜರುಪಡಿಸಿದಾಗ ದಾಖಲೆಗಳ ಮಹತ್ವ ಅರಿತು ಮುಂಜಾಗರೂಕತೆ ವಹಿಸುವ ಬಗ್ಗೆ ಬ್ಯಾಂಕ್ ಎಚ್ಚರದಿಂದ ಇರುವುದು ಆವಶ್ಯಕ. ಸಂಬಂಧಪಟ್ಟವರ ಮುಂದೆ ಹಾಜರುಪಡಿಸುವ ದಾಖಲೆಗಳು ಸ್ವೀಕಾರಾರ್ಹ ದಾಖಲೆ ಆಗಿರಬೇಕು. ಹಾಗೂ ಸಾಲದ ಬಗ್ಗೆ ಸಾಕ್ಷಿ ನೀಡುವ ದಾಖಲೆ

ಗಳಾಗಿರಬೇಕು. ದಾಖಲೆಗಳನ್ನು ಪಡೆಯುವಾಗ ಸರಿಯಾದ ಕ್ರಮಗಳನ್ನು ನಿರ್ವಹಿಸದಿದ್ದರೆ, ದಾಖಲೆಗಳು ಅಪೂರ್ಣವಾಗಿ ಅನೂರ್ಜಿತವಾದರೆ, ಬ್ಯಾಂಕ್ ದಾಖಲಿಸಿರುವ ಮೊಕದ್ದಮೆಯಲ್ಲಿ ಸೋಲು ಅನುಭವಿಸಬೇಕಾಗುವುದು. ಅಂತಹ ಪ್ರಸಂಗಗಳಲ್ಲಿ ದಾಖಲೆಯನ್ನು ಪಡೆದ ಉದ್ದೇಶವೇ ಈಡೇರದಂತಾಗದು.

ದಾಖಲೆಗಳನ್ನು ಪಡೆಯುವಾಗ ಸಂಭವಿಸಬಹುದಾದ ಅನರ್ಹತೆ, ತಪ್ಪುಗಳು, ಅದರಿಂದಾಗುವ ಪರಿಣಾಮಗಳ ಬಗ್ಗೆ ಸಂಬಂಧಿಸಿದ ಅಧಿಕಾರಿ, ಸಹಾಯಕಸಿಬ್ಬಂದಿಗೆ ಸೂಕ್ತ ಸೂಚನೆ, ಮಾಹಿತಿ, ತರಬೇತಿ ನೀಡುವುದು ಅತ್ಯಂತ ಮಹತ್ವದ ವಿಷಯ. ಸಾಲ ಪಡೆಯುವ ಸಂದರ್ಭದಲ್ಲಿ, ಸಾಲ ಪಡೆಯುವ ವ್ಯಕ್ತಿ, ಸಂಸ್ಥೆ, ತುಂಬಾ ಸಹಕಾರಿಯಾಗಿದ್ದು, ಖಾಲಿ ಸ್ಥಳಗಳಲ್ಲಿ ಸಹಿ ಮಾಡಲು, ಗುರುತು ಹಾಕಿದ ಸ್ಥಳಗಳಲ್ಲಿ ಸಹಿ ಮೊಹರು ಹಾಕಲು ಸಿದ್ಧರಾಗಿರುತ್ತಾರೆ. ಒಮ್ಮೆ ಸಾಲದ ಖಾತೆಯು ಕಟಬಾಕಿಯಾಗಿ ಮರುಪಾವತಿಗೆ ತೊಂದರೆಯಾದಾಗ, ತಾವು ಸಾಲದ ಮೊಬಲಗನ್ನು ಒಪ್ಪಿಕೊಳ್ಳುವ ಪುನರುಜ್ಜೀವನ ಪತ್ರಕ್ಕೆ ಆಗಲಿ, ಸಾಲದ ಮೊಬಲಗಿನ ದೃಢೀಕರಣಪತ್ರಕ್ಕೇ ಆಗು ಸಹಿ ಹಾಕುವಾಗ ಸಹಕಾರ ತೋರದೇ ಇರುವ ಸಂದರ್ಭಗಳುಂಟು. ಇಂತಹವುಗಳಿಂದ ತೊಂದರೆ ಅನುಭವಿಸ ಬಾರದೆಂದರೆ ದಾಖಲೆಗಳನ್ನು ಪಡೆಯುವ ಮುನ್ನ ಸರಿಯಾದ ಜಾಗ್ರತೆ ವಹಿಸುವುದು ಅಗತ್ಯ ಯಾವ ರೀತಿಯ ಜಾಗ್ರತೆ ವಹಿಸುವುದು ಎನ್ನುವುದನ್ನು ಮೂರು ಸಂದರ್ಭಗಳಾಗಿ ವಿಂಗಡಿಸಬಹುದು :

1 ದಾಖಲೆಗಳನ್ನು ಪಡೆಯುವ ಮುನ್ನ ಜಾಗರೂಕತೆಗಳು,
2 ದಾಖಲೆಗಳನ್ನು ಪಡೆಯುವಾಗ ಜಾಗರೂಕತೆಗಳು,
3 ದಾಖಲೆಗಳನ್ನು ಪಡೆದನಂತರ ತೆಗೆದುಕೊಳ್ಳುವ ಜಾಗ್ರತೆಗಳು.

**ದಾಖಲೆ ಪಡೆಯುವ ಮುನ್ನ ಜಾಗರೂಕತೆಗಳು**

ಗ್ರಾಹಕರೊಬ್ಬರು ಸಾಲ ಸೌಲಭ್ಯಕ್ಕೆ ಅಭ್ಯರ್ಥಿಸಿದಾಗ ಸಾಲದ ಉದ್ದೇಶ ಏನು ಎನ್ನುವ ಬಗ್ಗೆ ಮೊದಲು ತಿಳಿದುಕೊಳ್ಳಬೇಕು. ಕಂಪೆನಿಯೊಂದು ಸಾಲ ಸೌಲಭ್ಯಕ್ಕೆ ವಿನಂತಿಸಿದಾಗ, ಆ ಕಂಪೆನಿಯ ಸಂಘದ ಜ್ಞಾಪನಪತ್ರ ಬ್ಯಾಂಕ್‌ನಲ್ಲಿ ಸಾಲ ಪಡೆಯಲು ಅನುಮತಿಸುತ್ತದೆಯೇ ಇಲ್ಲವೇ ಎನ್ನುವುದನ್ನು ದೃಢಪಡಿಸಿಕೊಳ್ಳಬೇಕು. ಎರಡನೆಯದಾಗಿ, ಅದರ ಪ್ರತಿಯೊಂದನ್ನು ಬ್ಯಾಂಕ್ ಪಡೆದು, ಸಾಲದ ಪರಿಮಿತಿ ಏನು, ಸಾಲದ ಪತ್ರಗಳಿಗೆ ಸಹಿಮಾಡಬಹುದಾದ ವ್ಯಕ್ತಿಗಳು ಯಾರು ಯಾರು ? ಅವರ ವಿಳಾಸ. ಪದನಾಮ, ಅಧಿಕೃತ ಮೊಹರಿನ ಬಗ್ಗೆ, ಕಂಪೆನಿ ಅಧಿನಿಯಮ 1956ಕ್ಕೆ ಒಳಪಟ್ಟಿವೆಯೇ ಎನ್ನುವುದನ್ನು ಖಾತ್ರಿಪಡಿಸಿಕೊಳ್ಳಬೇಕು.

ಸಾಲ ಪಡೆಯುವ ವ್ಯಕ್ತಿಯು, ಆಸ್ತಿಯನ್ನು ಪರಭಾರೆ ಮಾಡಲು ಮುಂದೆ ಬಂದಾಗ, ಆ ವ್ಯಕ್ತಿಗೆ ಸರಿಯಾದ ಯಜಮಾನಿಕೆಗೆ, ಅಧೀನಕ್ಕೆ ಒಳಪಟ್ಟಿದೆ ಎನ್ನುವ ಬಗ್ಗೆ ಪರಿಶೀಲಿಸಬೇಕು. ಚರ ಆಸ್ತಿಗಳನ್ನು ಸಾಲಕ್ಕಾಗಿ ಪರಭಾರೆ ಮಾಡಲು ನೀಡಿದಾಗ, ಅವುಗಳ ಯಾಜಮಾನ್ಯವನ್ನು ದೃಢೀಕರಿಸುವ ಕಾಗದ ಪತ್ರ, ದಾಖಲೆ ನೋಡಿ ತಿಳಿದುಕೊಳ್ಳಬಹುದು. ಬ್ಯಾಂಕಿಗೆ ಪರಭಾರೆ ಮಾಡಲು ಅಂತಹ ಪ್ರಸಂಗಗಳಲ್ಲಿ ತೊಂದರೆಯಾಗದು. ಆದರೆ ಸ್ಥಿರ ಆಸ್ತಿಯನ್ನು ಸಾಲಕ್ಕಾಗಿ ಪರಭಾರೆ ಮಾಡಲು ಬಂದಾಗ ಬ್ಯಾಂಕ್ ಬಹಳಷ್ಟು ಮುತುವರ್ಜಿ ವಹಿಸಬೇಕು. ಹಕ್ಕುಪತ್ರಗಳು ಸರಿಯಾಗಿ ಇವೆ ಎನ್ನುವ ಪ್ರಮಾಣಪತ್ರವನ್ನು ಬ್ಯಾಂಕ್, ವಕೀಲರಿಂದ ಪಡೆದು ತನ್ನಿ ಎಂದು ಸೂಚಿಸುತ್ತದೆ. ಹಕ್ಕುಪತ್ರಗಳು ಸರಿಯಾಗಿವೆ ಮತ್ತು ಮಾರಾಟ ಯೋಗ್ಯವಾಗಿವೆ ಎನ್ನುವ ಪ್ರಮಾಣಪತ್ರದ ಆಧಾರದ ಮೇಲೆಯೇ ಬ್ಯಾಂಕ್ ಅದನ್ನು ಸ್ವೀಕರಿಸಿ, ಅವುಗಳ ಆಧಾರದ ಮೇಲೆ ಸಾಲಸೌಲಭ್ಯ ಕಲ್ಪಿಸಬಾರದು !

ಮೂವತ್ತು ವರ್ಷಗಳ ಅವಧಿಯ ಹಿಂದೆ ಅದೇ ಆಸ್ತಿಯ ಮೇಲೆ ಇದ್ದ ಪರಭಾರೆಯ ಬಗ್ಗೆ ಎನ್‌ಕಂಬ್ರೆನ್ಸ್ ಸರ್ಟಿಫಿಕೇಟ್ ಪಡೆಯುವುದು ಮುಖ್ಯ. ಹಿಂದೂ ಅವಿಭಕ್ತ ಕುಟುಂಬದ ಆಸ್ತಿಯ ಆಧಾರದ ಮೇಲೆ ಸಾಲಸೌಲಭ್ಯ ನೀಡುವ ಸಂದರ್ಭಗಳಲ್ಲಿ ಕರ್ತನ ಬಗ್ಗೆ, ಆಸ್ತಿಯ ಸಹಭಾಗಿದಾರರ ಬಗ್ಗೆ ವಿಚಾರಿಸಬೇಕು. ಅಪ್ರಾಪ್ತ ವಯಸ್ಕ ಸಹಭಾಗಿದಾರರಿದ್ದಲ್ಲಿ ಅವರ ಪರವಾಗಿ ಕರ್ತನು ಕೈಗೊಳ್ಳುವ, ಕೈಗೊಂಡಿರುವ ಕ್ರಮಗಳ ಬಗ್ಗೆ ಗಮನಹರಿಸಬೇಕು. ಸಾಲಸೌಲಭ್ಯಕ್ಕೆ ಅಡವಿಡಲು ಸಿದ್ಧ ಇರುವ ಆಸ್ತಿಯು ಸಂಬಂಧಪಟ್ಟ ವ್ಯಕ್ತಿಗಳ ಅಧೀನದಲ್ಲಿಯೇ, ಮೂರನೇ ವ್ಯಕ್ತಿಯ ಸುಪರ್ದಿಯಲ್ಲಿ ಇದೆಯೇ, ಬೇರೆ ಹಣಕಾಸು ಸಂಸ್ಥೆಗಳಲ್ಲಿ ಸಾಲಸೌಲಭ್ಯಕ್ಕೆ ಅಡವು ಇಟ್ಟಿದೆಯೇ ಎನ್ನುವುದನ್ನು ಪರಿಶೀಲಿಸಬೇಕು. ಕೆಲವೊಮ್ಮೆ ಸಾಲಸೌಲಭ್ಯಕ್ಕೆ ಅರ್ಜಿ ಸಲ್ಲಿಸಿದ ವ್ಯಕ್ತಿಯು ಹಕ್ಕು ಪತ್ರಗಳನ್ನು ಮುಂಡಿಸಿದ್ದರೂ, ಒಡೆತನದ ಬಗ್ಗೆ ತಕರಾರು ಎತ್ತುವ ಪ್ರಸಂಗಗಳು, 12 ವರ್ಷಕ್ಕೂ ಮೇಲ್ಪಟ್ಟು ಅದರ ಅಧೀನತೆ ಹೊಂದಿದ್ದರೆ, ಅಂತಹ ಪ್ರಸಂಗಗಳು ಬ್ಯಾಂಕಿಗೆ ಪೇಚು ಉಂಟುಮಾಡಬಹುದು. ಕಾಯ್ದೆ ಪ್ರಕಾರ ಕ್ರಮ ತೆಗೆದುಕೊಂಡಾಗ ಕೋರ್ಟಿನ ನಿರ್ದೇಶನ ಜಾರಿಗೊಳಿಸುವಲ್ಲಿ ಬ್ಯಾಂಕ್ ತೊಂದರೆ ಅನುಭವಿಸಬೇಕಾಗಬಹುದು. ಆ ಕಾಗದಪತ್ರಗಳಲ್ಲಿ ಏನಾದರೂ ಲೋಪದೋಷಗಳಿದ್ದಲ್ಲಿ, ಬ್ಯಾಂಕ್ ಸಾಲಸೌಲಭ್ಯ ನೀಡುವುದಕ್ಕೆ ಮುಂಚೆಯೇ ಸರಿಪಡಿಸಿ ಹಾಜರುಪಡಿಸಲು ಸಾಲ ಪಡೆಯುವ ವ್ಯಕ್ತಿಗೆ ತಿಳಿಸುವುದು ಅತ್ಯಾವಶ್ಯಕ. ಸದರಿ ಆಸ್ತಿಯು ವಂಶಪಾರಂಪರ್ಯವಾಗಿ ಬಂದಿರುವುದೋ ಖರೀದಿಸಿದ ಆಸ್ತಿಯೋ, ಬಾಡಿಗೆ ಒಪ್ಪಂದದ ಕರಾರು ಅವಧಿ ಮುಗಿದು ನವೀಕರಿಸಿರುವುದರ ಬಗ್ಗೆ ಎಚ್ಚರ ವಹಿಸಬೇಕು. ಮೂಲಪ್ರತಿಯನ್ನು ಇಂತಹ ಸಂದರ್ಭಗಳಲ್ಲಿ ಪರಿಶೀಲಿಸದೇ ಬ್ಯಾಂಕ್ ಸಾಲಸೌಲಭ್ಯಮಂಜೂರು ಮಾಡಬಾರದು. ಬ್ಯಾಂಕಿಗೆ ಅಡವಿಡಲು ನೀಡಿರುವ ಆಸ್ತಿಯು ನಗರಸಭೆ ಭೂಪರಿಮಿತಿ ಕಾಯ್ದೆಗೆ ಅನುಗುಣವಾಗಿ ಕಟ್ಟಿಸಿರುವ ಬಗ್ಗೆ ಪರಭಾರೆ ಮಾಡುವ ಮುಂಚೆ ನಿರ್ಧರಿಸಬೇಕು. ರಾಜ್ಯ ಸರಕಾರ ಕಾಯ್ದೆಗಳಿಗೆ ವಿರುದ್ಧ ನಿರ್ಮಿಸಿರುವ/ಕೊಂಡುಕೊಂಡ

ಆಸ್ತಿ ಪರಭಾರೆ ಮಾಡಿದ್ದಲ್ಲಿ, ಕೋರ್ಟಿನಲ್ಲಿ ಬ್ಯಾಂಕ್ ಪರವಾಗಿ ತೀರ್ಪು ಪಡೆಯುವಂತಿಲ್ಲ.

**ದಾಖಲೆಗಳನ್ನು ಪಡೆಯುವಾಗ ವಹಿಸಬೇಕಾದ ಜಾಗರೂಕತೆಗಳು**

ಮುಖ್ಯವಾದ ಅಂಶವೆಂದರೆ, ದಾಖಲೆಗಳಿಗೆ ಸರಿಯಾಗಿ ಸ್ಟಾಂಪು ಶುಲ್ಕ ನೀಡುವುದು. ಭಾರತದಲ್ಲಿ ಪ್ರತಿಯೊಂದು ದಾಖಲೆ ಸರಕಾರಕ್ಕೆ ಇಂತಿಷ್ಟು ಶುಲ್ಕ ನೀಡಬೇಕೆಂದು ಕೇಂದ್ರ ಹಾಗೂ ರಾಜ್ಯ ಸರಕಾರಗಳು ನಿರ್ಧರಿಸುತ್ತವೆ. ದಾಖಲೆಗಳಿಗೆ ಸರಿಯಾದ ಸ್ಟಾಂಪ್ ಶುಲ್ಕ ನೀಡದಿದ್ದಲ್ಲಿ, ಅವುಗಳನ್ನು ಸಾಕ್ಷಿಯಾಗಿ ಕೋರ್ಟಿನಲ್ಲಿ ಪರಿಗಣಿಸುವುದಿಲ್ಲ. ಅದಕ್ಕಾಗಿ, ದಾಖಲೆಗಳನ್ನು ಪಡೆಯುವಾಗ ಸರಿಯಾದ ನಿಗದಿತ ಸ್ಟಾಂಪ್ ಶುಲ್ಕ ಪಡೆಯಬೇಕು. ಯಾವುದೇ ದಾಖಲೆಗೆ ನಿಗದಿತ ಸ್ಟಾಂಪ್ ಶುಲ್ಕ ನೀಡದಿದ್ದಲ್ಲಿ ಅದು ಅಪೂರ್ಣ ದಾಖಲೆ ಎನಿಸುವುದು. ಈ ನ್ಯೂನತೆಯನ್ನು ಕೆಲವೊಂದು ಪ್ರಸಂಗಗಳಲ್ಲಿ ಸರಿಪಡಿಸಬಹುದು. ತಪ್ಪುದಂಡ ತುಂಬಿ (ಹತ್ತು ಪಟ್ಟು), ಆ ದಾಖಲೆಗಳನ್ನು ಕೆಲವೊಮ್ಮೆ ಸರಿಪಡಿಸಿ, ಬ್ಯಾಂಕ್ ಸಾಲದ ಹಣ ವಸೂಲಿ ಮಾಡಬಹುದು. ಇನ್ನು ಕೆಲಸಂದರ್ಭಗಳಲ್ಲಿ ಆ ರೀತಿ ತಪ್ಪುದಂಡ ಕಟ್ಟಿದರೂ ಕೋರ್ಟ್ ಒಪ್ಪದೇ ಬ್ಯಾಂಕ್ ಸಾಲದ ವಸೂಲಿಗೆ ತಡೆಒಡ್ಡಿ ಕೇಸನ್ನು ಅನೂರ್ಜಿತಗೊಳಿಸಬಹುದು. ಉದಾಹರಣೆಗೆ, ಪ್ರಾಮಿಸರಿ ನೋಟು, ಹುಂಡಿಗಳು ಸರಿಯಾದ ಸ್ಟಾಂಪ್ ಶುಲ್ಕ ತುಂಬಿದ ನಂತರ, ಅವುಗಳನ್ನು ರದ್ದುಪಡಿಸಿದ ಬಗ್ಗೆ ದೃಢೀಕರಿಸಬೇಕು. ಹೆಚ್ಚುವರಿ ಅಂಟಿಸಿದ ಸ್ಟಾಂಪ್‌ಗಳು ರದ್ದುಪಡಿಸಿದ ಬಗ್ಗೆ ಕೋರ್ಟ್ ಕೆಲವೊಮ್ಮೆ ತಕರಾರು ಅರ್ಜಿ ಸ್ವೀಕರಿಸಬಹುದು. ಬ್ಯಾಂಕ್ ಬರೀ ಸ್ಟಾಂಪ್ ಅಂಟಿಸಿರುವ ಬಗ್ಗೆ ಖಾತ್ರಿ ಮಾಡಿಕೊಳ್ಳದೇ ಅವುಗಳನ್ನು ಸರಿಯಾಗಿ ರದ್ದುಪಡಿಸಿದ ಬಗ್ಗೆ ಹೆಚ್ಚುವರಿ ಸ್ಟಾಂಪ್‌ಶುಲ್ಕ ನೀಡಿದ ಬಗ್ಗೆ, ರದ್ದತಿಯ ಬಗ್ಗೆ, ಗಮನಹರಿಸಬೇಕು.

**ಮೌಲ್ಯಾನುಗುಣ**

ಸ್ಟಾಂಪ್ ಶುಲ್ಕಕ್ಕೆ ಒಳಪಡಿಸುವ ಹೈಪಾಥಿಕೇಷನ್ ಸಾಲಗಳಿಗೆ ಕೆಲವೊಂದು ದಾಖಲೆಗಳು ಸಾಕ್ಷಿ ಪಡೆಯುವ ಪರಿಪಾಠ ನಿಲ್ಲಿಸಬೇಕು. ಸ್ಟಾಂಪು ಪೇಪರ್ ಕೊಂಡ ವ್ಯಕ್ತಿಯ ಹೆಸರು, ಮಾರಾಟಗಾರರ ಹೆಸರು, ಸ್ಟಾಂಪ್‌ಪತ್ರಗಳ ಹಿಂದೆ ನಮೂದಿಸಿರಬೇಕು. ದಿನಾಂಕ, ಸಾಲದ ಒಪ್ಪಂದ ಸಹಿ ಮಾಡಿರುವ ದಿನಾಂಕ, ಸ್ಥಳದ ಬಗ್ಗೆ ನಮೂನೆ ಇರಬೇಕು. ಹಿಂದಿನ ತಾರೀಕು ಹಾಕಿದ, ತಾರೀಕು ಹಾಕದ ದಾಖಲೆಗಳಿಗೆ ಸಹಿಮಾಡಿಸುವ ಪರಿಪಾಠ ಸರಿಯಲ್ಲ. ಅವಧಿಮೀರಿದ ಸ್ಟಾಂಪ್‌ಗಳ ಬಳಕೆಯಾದಾಗ ಅವುಗಳನ್ನು ಕೋರ್ಟ್ ತಿರಸ್ಕರಿಸಿ, ಅಂತಹ ದಾಖಲೆಗಳ ಆಧಾರದ ಮೇಲೆ ನೀಡಿದ ಬ್ಯಾಂಕ್ ಸಾಲಕ್ಕೆ ವಸೂಲಿ ಕ್ರಮಕ್ಕೆ ಕೋರ್ಟ್ ಆದೇಶ ನೀಡದಿರಬಹುದು.

ಎಷ್ಟೋ ಪ್ರಸಂಗಗಳಲ್ಲಿ ಖಾಲಿ ಸ್ಥಳ ಬಿಟ್ಟ ದಾಖಲೆಗಳನ್ನು, ಅಪೂರ್ಣ ದಾಖಲೆಗಳನ್ನು ಪಡೆಯುವ ಪರಿಪಾಠ ಕೆಲವೊಂದು ಬ್ಯಾಂಕ್‌ಗಳಲ್ಲಿದೆ. ಅಂತಹ ದಾಖಲೆಗಳನ್ನು ಕೋರ್ಟಿಗೆ ಹಾಜರುಪಡಿಸಿದಾಗ, ಸಾಕ್ಷಿಯಾಗಿ ತೋರಿಸಬಹುದಾದ ಅಪೂರ್ಣ ದಾಖಲೆಗಳು ಬ್ಯಾಂಕ್ ಹಿತಾಸಕ್ತಿ ಕಾಪಾಡುವಲ್ಲಿ ಅಡ್ಡಿ ಉಂಟು ಮಾಡುವ ಸಾಧನಗಳಾಗುವವು. ಯಾವುದೇ ರೀತಿಯಲ್ಲಿ ಅಪೂರ್ಣವಾಗದಂತೆ ದಾಖಲೆಗಳನ್ನು ತುಂಬಿಸಿ, ಸರಿಯಾದ ಸ್ಥಳದಲ್ಲಿ ಸಹಿ, ಮೊಹರು, ನಮೂದಿಸಬೇಕು. ಚಿತ್ತುಚಿತ್ತಾದ ಅಕ್ಷರಗಳಿದ್ದರೆ, ಹೊಡೆದುಹಾಕಿ ಬರೆದರೆ, ತಿದ್ದುಪಡಿ ಮಾಡುವಾಗ ಎಚ್ಚರ ವಹಿಸಿ, ಸಾಲಗಾರರ ಸಂಪೂರ್ಣ ಸಹಿ ಪಡೆಯುವುದು ಒಳ್ಳೆಯದು. ಕಂಪೆನಿಗಳಿಗೆ ಸಾಲ ನೀಡುವಾಗ ಅವುಗಳು ಸಂಘದ ವಿಧಿಗಳಲ್ಲಿ ನಮೂದಾಗಿರುವ ಅಂಶಗಳಿಗೆ ಅನುಗುಣವಾಗಿ ಇವೆಯೇ ಇಲ್ಲವೇ ಎಂಬುದನ್ನು ಗಮನಿಸಬೇಕು. ಸಂಬಂಧಪಟ್ಟ ಗೊತ್ತುವಳಿಯನ್ನು ಕಂಪೆನಿಯು ಅಂಗೀಕರಿಸಿದ ಬಗ್ಗೆ, ಅದರ ಪ್ರತಿಯೊಂದನ್ನು ದಾಖಲೆಯ ಜೊತೆಗೆ ಇಡಬೇಕು. ಪಾಲುದಾರಿಕೆ ಸಂಸ್ಥೆಗಳು ಸಾಲಸೌಲಭ್ಯಕ್ಕೆ ವಿನಂತಿಸಿದಾಗ ಪಾಲುದಾರಿಕೆ ಕರಾರು ಒಪ್ಪಂದದ ಮೂಲಪ್ರತಿ ಪರಿಶೀಲಿಸಬೇಕು, ಮತ್ತು ಎಲ್ಲ ಪಾಲುದಾರರ ಸಹಿ ಪಡೆಯಬೇಕು. ಅಧಿಕೃತ ಪಾಲುದಾರರ ಸಹಿ ಪಡೆದ ಬಗ್ಗೆ ಎಚ್ಚರ ವಹಿಸಬೇಕು. ಮೊಕ್ತ್ಯಾರುನಾಮ ಪ್ರಕಾರ ದಾಖಲೆಗಳಿಗೆ ಸಹಿ ಮಾಡಿದಾಗ, ಆ ಪತ್ರ ಹೊಂದಿದ ವ್ಯಕ್ತಿ ಈ ರೀತಿ ಸಹಿ ಮಾಡಲು ಅರ್ಹನೋ ಅಲ್ಲವೋ ಎಂಬುದನ್ನು ಮೂಲಪ್ರತಿ ನೋಡಿ ಖಾತ್ರಿ ಮಾಡಿಕೊಳ್ಳಬೇಕು. ಅಂತಿಮ ಇಷ್ಮಪತ್ರ, ಪರಭಾರೆಪತ್ರ, ಹಕ್ಕುಪತ್ರಗಳನ್ನು ಒಪ್ಪಿಸುವ ಪತ್ರದ ಪ್ರಕ್ರಿಯೆಯಲ್ಲಿ ಬ್ಯಾಂಕ್ ಕಾಳಜಿ ವಹಿಸಿ ಮುಂದುವರಿಯಬೇಕು. ನಿಗದಿತ ಅವಧಿಯಲ್ಲಿ ಪರಭಾರೆ ಮಾಡಿದ ಬಗ್ಗೆ ಕಂಪೆನಿ ರಿಜಿಸ್ಟ್ರಾರರಿಗೆ ತಿಳಿಸಬೇಕು.

**ದಾಖಲೆಗಳನ್ನು ಪಡೆದ ಅನಂತರದ ಎಚ್ಚರಿಕೆಗಳು**

1 ದಾಖಲೆಗಳನ್ನು ಪಡೆದ ನಂತರ, ಎಲ್ಲ ದಾಖಲೆಗಳಿಗೆ ಸಹಿ, ಮೊಹರು, ಸಂಬಂಧಪಟ್ಟ ವ್ಯಕ್ತಿಯ ಮೇಲುಸಹಿ ಪರಿಶೀಲಿಸಬೇಕು.

2 ದಾಖಲೆಗಳನ್ನು ಯಾವ ಸ್ಥಳದಲ್ಲಿ ಯಾರ ಸಮ್ಮುಖದಲ್ಲಿ ಯಾವ ವೇಳೆಯಲ್ಲಿ ನಿರ್ಮಿಸಲಾಯಿತು ಎನ್ನುವುದನ್ನು ನೋಡಿ ಸಾಲದ ಖಾತೆ ಬರೆಯಬೇಕು.

3 ದಾಖಲೆಗಳು, ಹಾಳಾಗದಂತೆ ಭದ್ರವಾಗಿಡಬೇಕು.

4 ದಾಖಲೆಗಳನ್ನು ಸಾಲದ ಖಾತೆ ಕ್ರಮಸಂಖ್ಯೆಗೆ ಅನುಗುಣವಾಗಿ ಗ್ರಾಮ ಸ್ಥಳಕ್ಕೆ ಅನುಗುಣವಾಗಿ ಜೋಡಿಸಿಟ್ಟುಕೊಂಡರೆ ಒಳಿತು.

5 ದಾಖಲೆಗಳು ಹಾಳಾಗದಂತೆ ಅವುಗಳಿಗೆ ಸೂಕ್ತ ಭದ್ರತೆ ಇರುವ ಕಪಾಟಿನಲ್ಲಿ ಭದ್ರವಾಗಿಡಬೇಕು.

[22ನೇ ಪುಟ ನೋಡಿ]

# ಬ್ಯಾಂಕುಗಳಲ್ಲಿ ಗುಣಮಟ್ಟ ವೃತ್ತದ ಪಾತ್ರ

**ಜಯಂತಿ ಮನೋಹರ್**
ಭಾರತೀಯ ಸ್ಟೇಟ್ ಬ್ಯಾಂಕ್, ಕೃಷಿ ವಿಶ್ವವಿದ್ಯಾಲಯ ಶಾಖೆ, ಹೆಬ್ಬಾಳ

---

**ಒಂದೇ ಕಾರ್ಯಕ್ಷೇತ್ರಕ್ಕೆ ಸೇರಿದ ಉದ್ಯೋಗಿಗಳು ನಿಯಮಿತ ಸಮಯದಲ್ಲಿ ಸೇರಿ, ತಮ್ಮ ಕಾರ್ಯಕ್ಷೇತ್ರಕ್ಕೆ ಸಂಬಂಧಿಸಿದ ಸಮಸ್ಯೆಯನ್ನು ಗುರುತಿಸಿ, ವಿಶ್ಲೇಷಿಸಿ, ಅದಕ್ಕೆ ಸೂಕ್ತ ಪರಿಹಾರವನ್ನು ಕೊಡುವುದೇ ಗುಣಮಟ್ಟ ವೃತ್ತದ ಕಾರ್ಯ**

---

ಉತ್ಪಾದಕತೆ ಹಾಗೂ ಲಾಭಪ್ರದತೆಗಳ ಸಾಧನೆಯು ಈಗಿನ ವಿದ್ಯುನ್ಮಾನ ದಶಕದಲ್ಲಿ ವ್ಯವಸ್ಥಾಪಕರಿಗೆ ದಿನದಿಂದ ದಿನಕ್ಕೆ ಹೊಸ ಹೊಸ ಸವಾಲುಗಳನ್ನು ಒಡ್ಡುತ್ತಿದೆ. ಈ ಸವಾಲುಗಳನ್ನು ಎದುರಿಸಿ, ತನ್ನ ಕ್ಷೇತ್ರದಲ್ಲಿ ಉತ್ಕೃಷ್ಟತೆಯನ್ನು ಸಾಧಿಸಲು ಪ್ರತಿಯೊಂದು ಉದ್ದಿಮೆ ಹಾಗೂ ಸಂಸ್ಥೆಯು ತನ್ನಲ್ಲಿರುವ ಮಾನವ ಸಂಪನ್ಮೂಲದ ಅಭಿವೃದ್ಧಿಗೆ ಹಿಂದೆಂದಿಗಿಂತಲೂ ಇಂದು ಹೆಚ್ಚಿನ ಪ್ರಾಮುಖ್ಯವನ್ನು ಕೊಟ್ಟಿದೆ. ಉತ್ಪಾದಕ ಘಟಕದಲ್ಲಿಯಾಗಲೀ, ಬ್ಯಾಂಕಿನಂತಹ ಸೇವಾ ಕ್ಷೇತ್ರದಲ್ಲಿಯಾಗಲೀ ಉದ್ಯೋಗಿಯು, ತಾನು ಮಾಡುತ್ತಿರುವ ಕೆಲಸದಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಾಗಲೇ ಅಲ್ಲಿ ಉತ್ಕೃಷ್ಟತೆಯ ಸಾಧನೆ ಸಿದ್ಧಿಸುವುದು. ಈ ನಿಟ್ಟಿನಲ್ಲಿ ಮಾನವಸಂಪನ್ಮೂಲದ ಅಭಿವೃದ್ಧಿಯು ಹೊಸ ಆಯಾಮಗಳನ್ನು ಪಡೆದುಕೊಂಡು, ಹೊಸ ಹೊಸ ಸಾಧನಗಳನ್ನು ಮೈಗೂಡಿಸಿಕೊಂಡು, 'ಗುಣಮಟ್ಟವೃತ್ತ'ದಂತಹ ಪ್ರಭಾವಿ ಪರಿಕಲ್ಪನೆಗಳ ಸೇರ್ಪಡೆಯೊಂದಿಗೆ ವ್ಯವಸ್ಥಾಪಕರಿಗೆ ತನ್ನ ಸಹಾಯಹಸ್ತವನ್ನು ನೀಡುತ್ತಿದೆ.

## ಗುಣಮಟ್ಟವೃತ್ತದ ಉಗಮ ಮತ್ತು ಬೆಳವಣಿಗೆ

ಎರಡನೇ ಜಾಗತಿಕ ಮಹಾಯುದ್ಧದ ನಂತರ, ಜಪಾನಿನಲ್ಲಿ, ಉದ್ದಿಮೆ ಕ್ಷೇತ್ರದಲ್ಲಿ ಉತ್ಪಾದಕತೆಯ ಮಟ್ಟ ಕುಸಿದಿದ್ದು, ಆಗ ಪ್ರಚಲಿತವಿದ್ದ ಮನಬಂದಂತೆ ಕೆಲಸಕ್ಕೆ ಸೇರಿಸಿಕೊಳ್ಳುವ ಹಾಗೂ ತೆಗೆಯುವ ನೀತಿಯಿಂದಾಗಿ ಉದ್ಯೋಗಿಗಳ ಮನಃಸ್ಥೈರ್ಯವು ತೀರ ದುರ್ಬಲ ಮಟ್ಟಕ್ಕೆ ಇಳಿದಿತ್ತು. ಆ ಸಮಯದಲ್ಲಿ, ಮನಃಸ್ಥೈರ್ಯವನ್ನು ಹೆಚ್ಚಿಸುವ, ವ್ಯಕ್ತಿವಿಕಾಸವನ್ನು ಸಾಧಿಸಿ, ತನ್ಮೂಲಕ ಸಂಸ್ಥೆಯ ಏಳಿಗೆಯನ್ನು ಸಾಧಿಸುವ ನೂತನ ಪರಿಕಲ್ಪನೆಯಾಗಿ 'ಗುಣಮಟ್ಟವೃತ್ತ'ವನ್ನು 1962ರಲ್ಲಿ ಜಪಾನಿನ ಡಾ. ಇಶಿಕೋರವರು ರೂಪಿಸಿದರು. ಒಂದು ಸಣ್ಣ ಕಿಡಿಯಾಗಿ ಪ್ರಾರಂಭಗೊಂಡ ಈ ಪರಿಕಲ್ಪನೆಯು ಇಂದು ವಿಶ್ವವ್ಯಾಪಿಯಾದ ದೊಡ್ಡ ಆಂದೋಲನವಾಗಿ ಬೆಳೆದಿದೆ. ಜಪಾನಿನಲ್ಲಿ ಒಂದು ಕೋಟಿ ಉದ್ಯೋಗಿಗಳು ಗುಣಮಟ್ಟವೃತ್ತದ ಚಟುವಟಿಕೆಗಳಲ್ಲಿ ಭಾಗ ವಹಿಸುತ್ತಿದ್ದಾರೆ. ಒಟ್ಟು ಐವತ್ತು ದೇಶಗಳಲ್ಲಿ ಇದರ ಪ್ರಭಾವ ಇಂದು ಹರಡಿದೆ.

ನಮ್ಮ ದೇಶದಲ್ಲಿ ಭಾರತ್ ಹೆವಿ ಎಲೆಕ್ಟ್ರಾನಿಕ್ಸ್‌ನಲ್ಲಿ ಹೈದರಾಬಾದು ಗುಣಮಟ್ಟವೃತ್ತದ ಪದಾರ್ಪಣವಾಗಿ, ಟೆಲ್‌ಕೊ, ಸೇಲ್, ಇಸಿಲ್, ಬಜಾಜ್ ಆಟೊ, ಹಿಂದೂಸ್ತಾನ್ ಆಂಟಿಬಯಾಟಿಕ್ಸ್, ಬಿಇಎಲ್, ಏರ್‌ಇಂಡಿಯ, ಎನ್‌ಟಿಸಿ, ಮುಂತಾದೆಡೆಗಳಲ್ಲಿ ಪಸರಿ, ಸೇವಾಕ್ಷೇತ್ರವಾದ ಬ್ಯಾಂಕುಗಳಲ್ಲಿ ಬಂದು ಸೇರಿದ್ದು 1984ರಲ್ಲಿ ಮತ್ತು 1987ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕು, 'ಗುಣಮಟ್ಟವೃತ್ತ'ವನ್ನು ತಮ್ಮತಮ್ಮ ಸಂಸ್ಥೆಗಳಲ್ಲಿ ರೂಢಿಸಿಕೊಳ್ಳಲು ಕರೆಯಿತ್ತಾದರೂ, ಭಾರತೀಯ ಸ್ಟೇಟ್ ಬ್ಯಾಂಕಿನ ಭೂಪಾಲ್ ವೃತ್ತದಲ್ಲಿ 1984ರಲ್ಲೇ ಸೇರ್ಪಡೆಯಾದದ್ದನ್ನು ಇಲ್ಲಿ ಉಲ್ಲೇಖಿಸಬಹುದು. ಈಗ ಭಾರತೀಯ ಸ್ಟೇಟ್ ಬ್ಯಾಂಕಿನ 200 ಶಾಖೆಗಳು ಹಾಗೂ ಕಾರ್ಯಾಲಯಗಳಲ್ಲಿ 'ಗುಣಮಟ್ಟವೃತ್ತ' ರಚಿತವಾಗಿದೆ. ಕೆನರಾ ಬ್ಯಾಂಕು, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಹಾಗೂ ಇನ್ನಿತರ ಬ್ಯಾಂಕುಗಳಲ್ಲಿಯೂ ಇದು ತನ್ನ ಪ್ರಭಾವವನ್ನು ಬೀರುತ್ತಲಿದೆ.

## ಗುಣಮಟ್ಟವೃತ್ತದ ಪರಿಕಲ್ಪನೆ

ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಸಮಾಜವು ತನ್ನನ್ನು ಗುರುತಿಸಬೇಕೆಂದಿರುವ ಮಾನಸಿಕ ಅಗತ್ಯವನ್ನು ಪ್ರಮುಖವಾಗಿ ಪೂರೈಸುವ ಈ ಪರಿಕಲ್ಪನೆಯು ವ್ಯಕ್ತಿಯ ಸಂಪೂರ್ಣ ವ್ಯಕ್ತಿತ್ವವನ್ನು ವಿಕಾಸಗೊಳಿಸುವಲ್ಲಿ ನೆರವಾಗುತ್ತದೆ. ಇಲ್ಲಿ ಶ್ರೀ ಅಬ್ರಹಮ್ ಮಾಸ್‌ಲೋರವರು ಮಾನವರ ಅಗತ್ಯಗಳ ಶ್ರೇಣಿಯನ್ನು ಕೆಳಗಿನ ಮಜಲುಗಳಲ್ಲಿ ಗುರುತಿಸಿದ್ದಾರೆ.

ಪ್ರತಿಯೊಬ್ಬ ವ್ಯಕ್ತಿಗೆ (1) ಆಹಾರ, ಬಾಯಾರಿಕೆ, ನಿದ್ದೆ, ಆರೋಗ್ಯ, ವಿಶ್ರಾಂತಿ ಮೊದಲಾದ ದೈಹಿಕ ಅಗತ್ಯಗಳ ಪೂರೈಕೆ

ಮೊದಲ ಅಗತ್ಯವಾಗುತ್ತದೆ. (2) ರಕ್ಷಣೆ ಹಾಗೂ ಭದ್ರತೆಯ ವಿಚಾರ ಪ್ರಮುಖವಾಗುತ್ತದೆ. (3) ಆತ್ಮೀಯತೆ, ಬಂಧುಬಾಂಧವರ ಹಾಗೂ ಸ್ನೇಹಿತರ ಪ್ರೀತಿಗಾಗಿ ಹಾತೊರೆಯುವ ಮನಸ್ಸು, ಸಮಾಜದಲ್ಲಿ ತನಗೊಂದು ಸ್ಥಾನ ಬೇಕೆಂಬ ಬಯಕೆಯಿಂದ ಹಲವಾರು ಕೆಲಸಗಳನ್ನು ಮಾಡತೊಡಗುತ್ತಾನೆ. (4) ತನ್ನ ಬುದ್ಧಿಮತ್ತೆಗೆ ತಕ್ಕಂತಹ ಸ್ಥಾನವನ್ನು ಸಂಪಾದಿಸಲು, ಆತ್ಮಗೌರವವನ್ನು ಹೆಚ್ಚಿಸಿಕೊಳ್ಳುವಂತಹ ಅವಕಾಶಗಳಿಗಾಗಿ ನಿರಂತರವಾಗಿ ಕಾಯುತ್ತಾ, ತನ್ನ ಶಕ್ತಿ-ಸಾಮರ್ಥ್ಯಗಳನ್ನು ಪ್ರದರ್ಶಿಸುವ ಕನಸುಗಳನ್ನು ಕಾಣುತ್ತಾನೆ. (5) ತಾನು ಹಿಡಿದ ಕಾರ್ಯವನ್ನು ಸಾಧಿಸಿದ್ದೇನೆಂಬ ಸಮಾಧಾನ, ತನ್ನ ಶಕ್ತಿ-ಸಾಮರ್ಥ್ಯಗಳು ಉಪಯೋಗಕ್ಕೆ ಬಂದವೆಂಬ ಹಾಗೂ ಸಾಧನೆಯ ಪರಿಪೂರ್ಣಭಾವದೊಂದಿಗೆ ತೃಪ್ತಮನಸ್ಕನಾಗುತ್ತಾನೆ.

ಗುಣಮಟ್ಟವೃತ್ತದ ಕಾರ್ಯ ಪ್ರಕ್ರಿಯೆಯಲ್ಲಿ ಅದರಲ್ಲಿ ಭಾಗವಹಿಸುವವರ ಈ ಎಲ್ಲ ಅಗತ್ಯಗಳ ಪೂರೈಕೆಯಾಗಿ, ತಾವು ಪರಿಪೂರ್ಣವಾಗಿ ವಿಕಾಸಗೊಳ್ಳುವುದರೊಂದಿಗೆ, ಕೆಲಸದಲ್ಲಿ ತಾದಾತ್ಮ್ಯವನ್ನು ಸಾಧಿಸುವುದರಿಂದಾಗಿ ತಮ್ಮ ಸಂಸ್ಥೆಯ ಉತ್ಕೃಷ್ಟತೆಯ ಸಾಧನೆಗೂ ಕಾರಣರಾಗುತ್ತಾರೆ.

## ಗುಣಮಟ್ಟವೃತ್ತದ ಸ್ವರೂಪ

ಒಂದೇ ಕಾರ್ಯಕ್ಷೇತ್ರಕ್ಕೆ ಸೇರಿದ ಉದ್ಯೋಗಿಗಳು ಸ್ವಯಂ ಪ್ರೇರಣೆಯಿಂದ ನಿಯಮಿತ ಸಮಯದಲ್ಲಿ ಸೇರಿ, ತಮ್ಮ ಕಾರ್ಯಕ್ಷೇತ್ರಕ್ಕೆ ಸಂಬಂಧಿಸಿದ ಸಮಸ್ಯೆಯನ್ನು ಗುರುತಿಸಿ, ವಿಶ್ಲೇಷಿಸಿ, ಅದಕ್ಕೆ ಸೂಕ್ತ ಪರಿಹಾರವನ್ನು ಕೊಡುವುದೇ ಗುಣಮಟ್ಟವೃತ್ತದ ಕಾರ್ಯ. ಇಲ್ಲಿ ಭಾಗವಹಿಸುವ ಉದ್ಯೋಗಿಗಳ ಸಂಖ್ಯೆ 7 ಅಥವಾ 8ಕ್ಕೆ ಮೀರಬಾರದೆಂಬುದನ್ನು ಗಮನಿಸಬೇಕು. ಇದಕ್ಕಿಂತ ದೊಡ್ಡ ತಂಡವಾದರೆ ತಂಡದ ಪ್ರತಿಯೊಬ್ಬ ವ್ಯಕ್ತಿಯ ಅಭಿಪ್ರಾಯಮಂಡನೆಗೆ ತೆಗೆದುಕೊಳ್ಳುವ ಸಮಯವು ಅಳತೆ ಮೀರಿ ಹೋಗುವ ಸಂಭವವಿರುತ್ತದೆ. ಇಲ್ಲಿ ತಂಡದ ವ್ಯಕ್ತಿಗಳು ಒಂದೇ ಕಾರ್ಯಕ್ಷೇತ್ರದವರಾಗಿರುವುದು ಅತ್ಯಗತ್ಯವಾದುದು. ಇಲ್ಲಿ ಪ್ರತಿಯೊಬ್ಬರಿಗೂ ಸಮಾನ ಅವಕಾಶವಿರುವುದರಿಂದ, ಒಂದೇ ಬಗೆಯ ಕೆಲಸ ಮಾಡುವವರೆಲ್ಲರಿಗೂ ಪರಿಚಿತವಿರುವ ಸಮಸ್ಯೆಗಳನ್ನು ಗುರುತಿಸುವುದು, ಅನಂತರ ಅದನ್ನು ವಿಶ್ಲೇಷಿಸುವುದು ಸುಲಭಸಾಧ್ಯವಾಗುತ್ತದೆ. ಬ್ಯಾಂಕಿನ ಪರಿಸರವನ್ನು ಗಮನಿಸಿದರೆ, ಒಂದು ದೊಡ್ಡ ಶಾಖೆಯಲ್ಲಿ, ಬೇರೆ ಬೇರೆ ವಿಭಾಗದಲ್ಲಿ ಕೆಲಸ ಮಾಡುವವರು ಬೇರೆಬೇರೆ ವೃತ್ತಗಳನ್ನು ಮಾಡಿಕೊಳ್ಳುವುದು ಅಗತ್ಯವಾಗುತ್ತದೆ. ಒಂದು ಸಮಸ್ಯೆಯನ್ನು ಗುರುತಿಸಿ, ವಿಶ್ಲೇಷಿಸಿ, ಪರಿಹಾರವನ್ನು ಕೊಟ್ಟಮೇಲೆ ಪುನಃ ಅದೇ ತಂಡ ಅಥವಾ ಕೆಲವು ಬದಲಾವಣೆಗಳೊಂದಿಗೆ ಮತ್ತೆಮತ್ತೆ ಗುಣಮಟ್ಟವೃತ್ತಗಳನ್ನು ರಚಿಸಬಹುದು. ಇಲ್ಲಿ ಸದಸ್ಯರು ಸ್ವಯಂಪ್ರೇರಣೆಯಿಂದ ಬರುವುದೂ ಪ್ರಮುಖವಾದ ಅಂಶ. ಸಮಸ್ಯೆಯ ಪರಿಹಾರ ಎಂದಾಕ್ಷಣ ಬ್ಯಾಂಕಿನ ಯಾವುದಾದರೊಂದು ಕಾರ್ಯಕ್ಷೇತ್ರದಲ್ಲಿ ಆಗದೆ ಉಳಿದಿರುವ ಕೆಲಸವನ್ನು ಪೂರೈಸಲು ವ್ಯವಸ್ಥಾಪಕರು ಈ ವೃತ್ತವನ್ನು ಬಳಸಿಕೊಳ್ಳುವ ಸಾಧ್ಯತೆ ಹೆಚ್ಚಾಗುತ್ತದೆ. ಇಲ್ಲಿ ಗುಣಮಟ್ಟವೃತ್ತದ ಸದಸ್ಯರು ಸಂಪೂರ್ಣವಾಗಿ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಾರೆ. ವ್ಯವಸ್ಥಾಪಕವರ್ಗದಿಂದ ಯಾವುದೇ ಸ್ತರದಲ್ಲಿಯೂ ಒತ್ತಾಯವಾಗಲು ತಮ್ಮ ಅಭಿಪ್ರಾಯದ ಹೇರಿಕೆಯಾಗಲೀ ಸೂಕ್ತವಲ್ಲ. ಹಾಗೆಂದಮಾತ್ರಕ್ಕೆ ವ್ಯವಸ್ಥಾಪಕರ ಪಾತ್ರವೇ ಇಲ್ಲವೆಂದಲ್ಲ. ಇಲ್ಲಿ ಬ್ಯಾಂಕೊಂದರ ಚಿಕ್ಕ ಶಾಖೆಯ ವ್ಯವಸ್ಥಾಪಕರಿಂದ ಅಥವಾ ದೊಡ್ಡ ಶಾಖೆಯ ಕಾರ್ಯಾಲಯದ ಒಂದು ವಿಭಾಗದ ಮುಖ್ಯಸ್ಥರಿಂದ ಗುಣಮಟ್ಟವೃತ್ತಕ್ಕೆ ಸಾಕಷ್ಟು ನೆರವನ್ನು ತಾವು ಹಿನ್ನೆಲೆಯಲ್ಲಿ ನಿಂತು, ತಮ್ಮ ಅಧಿಕಾರದ ಲೇಪವಿಲ್ಲದಂತೆ ಕೊಡುತ್ತಿರಬೇಕು. ವೃತ್ತದ ಕಲಾಪಗಳ ಬಗ್ಗೆ ತಮ್ಮ ಆಸಕ್ತಿಯನ್ನು ತೋರಿಸಬೇಕು. ಇಲ್ಲಿ ವ್ಯವಸ್ಥಾಪಕರು ತಮ್ಮ ಉದ್ಯೋಗಿಗಳ ಸಂಪೂರ್ಣ ನಂಬಿಕೆಯೇ ಮುಖ್ಯ ಆಧಾರ.

## ಗುಣಮಟ್ಟವೃತ್ತದ ಸಂರಚನೆ

ವಾಸ್ತವವಾಗಿ ಈ ವೃತ್ತದ ಕಾರ್ಯವು ನಿರ್ಣಯಾಧಿಕಾರವಿಲ್ಲದ ಕೆಳಗಿನ ಸ್ತರದ ಉದ್ಯೋಗಿಗಳಿಂದಲೇ ನಡೆಯುವುದಾದರೂ, ಇದರ ಸಾಫಲ್ಯಕ್ಕಾಗಿ ಅತ್ಯಂತ ಉನ್ನತ ವ್ಯವಸ್ಥಾಪನವರ್ಗದ ಸಂಪೂರ್ಣ ಬೆಂಬಲ ಅತ್ಯಗತ್ಯವಾಗುತ್ತದೆ. ಅವರು ಗುಣಮಟ್ಟವೃತ್ತದ ಬಗೆಗಿನ ತಮ್ಮ ಕಾಳಜಿಯನ್ನು ವ್ಯಕ್ತಿಸ್ವರೂಪದಲ್ಲಿ ಆಗಿಂದಾಗ್ಗೆ ಸುತ್ತೋಲೆಗಳ ಮೂಲಕ, ಗೃಹಪತ್ರಿಕೆಗಳ ಮೂಲಕ, ಉದ್ಯೋಗಿಗಳಿಗೆ ತಕ್ಕ ತರಪೇತಿಯನ್ನು ಏರ್ಪಡಿಸುವುದರ ಮೂಲಕ ಹಾಗು ಅಗತ್ಯವಾದ ಹಣದ ನೆರವನ್ನು ನೀಡುವುದರ ಮೂಲಕ ಮಾಡುತ್ತಾರೆ. ಇದರ ಸಫಲತೆಗಾಗಿ ರಚಿತವಾಗುವ ಉನ್ನತ ಮಟ್ಟದ 'ಚಾಲಕ ಸಮಿತಿ'ಯಿಂದ ಹಾಗೂ ಅದರ ಕೆಳಗೆ ಕೆಲಸ ಮಾಡುವ ಸಹಯೋಗ ನೀಡುವ ಅಭಿಕರಣ ಹೀಗೆ ಉನ್ನತ ಮಟ್ಟದ ಮಜಲುಗಳಿಂದ ಹರಿದುಬರುವ ಪ್ರೋತ್ಸಾಹದಿಂದ ಗುಣಮಟ್ಟ ವೃತ್ತವು ತನ್ನ ಕಾರ್ಯಸಾಧನೆಯತ್ತ ಸಾಗುತ್ತದೆ

## ಗುಣಮಟ್ಟವೃತ್ತದ ಕಾರ್ಯ

ಈಗ ಗುಣಮಟ್ಟವೃತ್ತವು ವಾಸ್ತವವಾಗಿ ಮಾಡುವ ಕಾರ್ಯವನ್ನು ನೋಡೋಣ. ಹಿಂದೆ ತಿಳಿಸಿರುವಂತೆ, ಸ್ವಯಂಪ್ರೇರಣೆಯಿಂದ ಬಂದು ಸೇರಿರುವ 7–8 ಸಂಖ್ಯೆಯ, ಒಂದೇ ಕಾರ್ಯಕ್ಷೇತ್ರದಲ್ಲಿ ಕೆಲಸಮಾಡುವ ಉದ್ಯೋಗಿಗಳು ತಮ್ಮಲ್ಲೇ ಒಬ್ಬರನ್ನು ನಾಯಕರನ್ನಾಗಿಯೂ ಇನ್ನೊಬ್ಬರನ್ನು ಉಪನಾಯಕರನ್ನಾಗಿಯೂ ಆಯ್ಕೆ ಮಾಡುತ್ತಾರೆ. ತಮ್ಮ ಗುಣಮಟ್ಟವೃತ್ತಕ್ಕೆ ಪ್ರೋತ್ಸಾಹ ಹಾಗೂ ಸಹಕಾರಗಳನ್ನು ನೀಡಲು ಬಂದಿರುವಂತಹ 'ಸಹಾಯಕ'ರೂ [ಸಾಮಾನ್ಯವಾಗಿ ಇವರನ್ನು ಉನ್ನತಮಟ್ಟದ ಸಮಿತಿಯಿಂದ ನೇಮಿಸುತ್ತಾರೆ] ಸೇರಿದಂತೆ ಒಂದು ತಿಂಗಳಲ್ಲಿ ಕನಿಷ್ಠ ಪಕ್ಷ 2 ಬಾರಿಯಾದರೂ ನಿಯಮಿತವಾಗಿ ಭೇಟಿಮಾಡಲು

ದಿನಾಂಕಗಳನ್ನು ನಿರ್ಧರಿಸುತ್ತಾರೆ. ಇಲ್ಲಿ 'ಸಹಾಯಕ'ರಾಗಿ ಬಂದವರು ನೇರವಾಗಿ ಭಾಗಿಯಾಗುವಂತಿಲ್ಲ. ಹತ್ತಿರದಲ್ಲೇ ಇದ್ದು, ಸದಸ್ಯರಲ್ಲೇ ತೀವ್ರವಾಗಿ ಮತಭೇದವುಂಟಾದಾಗ ಅಥವಾ ಮೇಲ್ಮಟ್ಟದ ಅಧಿಕಾರಿಗಳಿಂದ ಬರಬೇಕಾದ ನೆರವನ್ನು ದೊರಕಿಸಿಕೊಡುವ ಸಂದರ್ಭದಲ್ಲಿ ಹಾಗೂ ಗುಣಮಟ್ಟವೃತ್ತದ ಪರಿಕಲ್ಪನೆಯನ್ನು ಸದಸ್ಯರಿಗೆ ತಿಳಿಸಿಹೇಳುವಲ್ಲಿ ಮಾತ್ರ ಇವರ ನೇರವಾದ ಪಾತ್ರವಿರುತ್ತದೆ.

ತಂಡದ ನಾಯಕರು ಕೂಡ ಮಾರ್ಗದರ್ಶನದ ಕೆಲಸವನ್ನು ಹೆಚ್ಚಾಗಿ ಮಾಡಿ, ತಂಡದ ಪ್ರತಿಯೊಬ್ಬ ಸದಸ್ಯರೂ ಸಕ್ರಿಯವಾಗಿ ಭಾಗವಹಿಸುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊರಬೇಕಾಗುವುದು. ಗುಣಮಟ್ಟವೃತ್ತದ ತಂಡದ ನಾಯಕರ ಗೈರುಹಾಜರಿಯಲ್ಲಿ ಉಪನಾಯಕರು ಅವರ ಕೆಲಸವನ್ನು ನಿರ್ವಹಿಸುತ್ತಾರೆ. ಈಗ ಗುಣಮಟ್ಟ ವೃತ್ತದ ಪ್ರಕ್ರಿಯೆಯನ್ನು ಅಥವಾ ಅದು ಕಾರ್ಯ ನಿರ್ವಹಿಸುವ ರೀತಿಯನ್ನು ನೋಡೋಣ. ಇಲ್ಲಿ ಬ್ರೇನ್ ಸ್ಟಾರ್ಮಿಂಗ್ ಅಂದರೆ, ಪ್ರತಿಯೊಬ್ಬ ಸದಸ್ಯರ ತಲೆಯಲ್ಲಿ ಆ ಕ್ಷಣದಲ್ಲಿ ಬರುವ ಪ್ರತಿಯೊಂದು ವಿಚಾರವನ್ನು ಇದ್ದಹಾಗೆಯೇ ಬಂದಹಾಗೆಯೇ ಪಟ್ಟಿಮಾಡುವುದು ಮೊದಲನೆಯದಾಗುತ್ತದೆ. ಅಂದರೆ, ಗುಣಮಟ್ಟವೃತ್ತಕ್ಕಾಗಿ ಬಂದ ತಂಡದ ಸದಸ್ಯರ ಮುಂದೆ ಮೊದಲನೆಯದಾಗಿ ತಮ್ಮ ಕಾರ್ಯಕ್ಷೇತ್ರದಲ್ಲಿರುವ, ತಾವು ಪರಿಹಾರಕೊಡಲು ಬಯಸುವ ಸಮಸ್ಯೆಗಳ ಪಟ್ಟಿಯ ತಯಾರಿಕೆಯು ಇರುತ್ತದೆ. ಈ ಪಟ್ಟಿ ತಯಾರಾದ ನಂತರ ಆಯಾ ಶಾಖೆಯಲ್ಲಿರುವ ಅಥವಾ ಆಯಾ ವಿಭಾಗದಲ್ಲಿರುವ ಇತರ ಉದ್ಯೋಗಿಗಳೂ ಸೇರಿದಂತೆ ಯಾವ ಸಮಸ್ಯೆಯು ಅತ್ಯಂತ ಪ್ರಾಮುಖ್ಯವನ್ನು ಪಡೆಯುತ್ತದೆಯೋ ಅದನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ, ಇಲ್ಲಿಯೂ ತಾಂತ್ರಿಕವಾಗಿ ಸಿದ್ಧವಾಗಿರುವ ಸಾಧನವಾದ ದತ್ತಾಂಶ ಸಂಗ್ರಹದ ವಿಶ್ಲೇಷಣಾ ವಿಧಾನದಿಂದ ಸಮರ್ಪಕವಾಗಿ ಸೂಚಿಸಬಹುದು. ಉದಾಹರಣೆಗಾಗಿ, ಒಂದು ಗುಣಮಟ್ಟವೃತ್ತದಲ್ಲಿ ಬಂದಿರಬಹುದಾದ ಸಮಸ್ಯೆಗಳ ಪಟ್ಟಿಯನ್ನು ನೋಡಿ :

1 ಗ್ರಾಹಕರ ಅಸಂತೃಪ್ತಿ,
2 ಪಾಸು ಪುಸ್ತಕದಲ್ಲಿ ನಮೂದು ಸರಿ ಇಲ್ಲದಿರುವುದು,
3 ಡ್ರಾಫ್ಟುಗಳ ನೀಡಿಕೆಯಲ್ಲಿ ವಿಳಂಬ,
4 ತೀರುವೆ ಚೆಕ್ಕುಗಳ ಪಾವತಿಯಲ್ಲಿ ವಿಳಂಬ, ಇತ್ಯಾದಿ.

ಇಲ್ಲಿ ಪಟ್ಟಿಯಲ್ಲಿ ಮೂರನೆಯದಾದ ಡ್ರಾಫ್ಟುಗಳ ನೀಡಿಕೆಯನ್ನೇ ಅತ್ಯಂತ ಪ್ರಮುಖ ಸಮಸ್ಯೆಯೆಂದು ಒಟ್ಟಾರೆ ಅಭಿಪ್ರಾಯಬಂದಿರುವುದರಿಂದ ಆ ಸಮಸ್ಯೆಯನ್ನೇ ಕೈಗೆತ್ತಿಕೊಳ್ಳುತ್ತಾರೆ.

ಸಮಸ್ಯೆಯನ್ನು ಗುರುತಿಸಿದ ನಂತರ ಎಲ್ಲರ ಅಭಿಪ್ರಾಯಗಳನ್ನು ಮತ್ತೆ ಪಟ್ಟಿಮಾಡಿ ಯಾರೊಬ್ಬರ ಸಲಹೆಯನ್ನೂ ಅಲ್ಲಗಳೆಯ ವಿಶ್ಲೇಷಿಸುವುದು ಎರಡನೆಯ ಹಂತವಾಗುತ್ತದೆ. ವಿಶ್ಲೇಷಣೆ ಸುಲಭವಾಗುವಂತೆ ಕೆಲವು ಲಭ್ಯವಿರುವ ಸಾಧನಗಳ ನೆರವನ್ನು ಸಾಮಾನ್ಯವಾಗಿ ಪಡೆಯುತ್ತಾರೆ.

ಬೇರೆ ಬೇರೆ ಶೀರ್ಷಿಕೆಯಡಿಯಲ್ಲಿ ಕಾರಣಗಳನ್ನು ಗುರುತಿಸುವುದರಿಂದ ಸಮಸ್ಯಾಪರಿಹಾರ ಸುಲಭವಾಗುತ್ತದೆ. ಈ ನಿಟ್ಟಿನಲ್ಲಿ ಇನ್ನೂ ಹಲವಾರು ಸಾಧನಗಳು ಲಭ್ಯವಿವೆ. ಇಲ್ಲಿ ವೃತ್ತದ ಗುಣಮಟ್ಟ ಮಾರ್ಗದರ್ಶಿತ ಚೌಕಟ್ಟಿನಲ್ಲಿಯೇ ವ್ಯವಸ್ಥಿತವಾಗಿ ನಡೆದು ಪರಿಹಾರ ಕಂಡುಕೊಂಡಮೇಲೆ ಅದನ್ನು ಸೂಚಿಸುವ ವಿಧಾನದಲ್ಲಿಯೂ ತಾಂತ್ರಿಕ ಸಾಧನಗಳ ನೆರವನ್ನು ಪಡೆಯಬೇಕೆಂದು ಆಶಿಸುತ್ತಾರೆ.

ಹೀಗೆ ತಯಾರಾದ ಸಮಸ್ಯಾ ಪರಿಹಾರದ ಪ್ರದರ್ಶನ ಅಥವಾ 'ಪರಿಹಾರದ ಮಂಡನೆ'ಯನ್ನು ವೃತ್ತದ ಸದಸ್ಯರು ತಮ್ಮ ಶಾಖಾ ವ್ಯವಸ್ಥಾಪಕರೆದುರಿಗೆ ಇಡುವುದು ಒಂದು ಮುಖ್ಯ ಘಟ್ಟವಾಗುತ್ತದೆ. ಗುಣಮಟ್ಟವೃತ್ತವು ಈ ರೀತಿಯಲ್ಲಿ ಕಂಡುಕೊಂಡ ಪರಿಹಾರವನ್ನು ಒಪ್ಪಿಕೊಂಡು ಅದನ್ನು ನಡೆಸಿಕೊಡಲು ವ್ಯವಸ್ಥಾಪಕರಿಗೆ ಕಟ್ಟುನಿಟ್ಟಾದ ಬಾಧ್ಯತೆಯೇನಿಲ್ಲ. ಹಲವಾರು ಬಾರಿ, ಪರಿಹಾರೋಪಾಯದ ದುಬಾರಿ ವೆಚ್ಚದಿಂದಾಗಿಯೋ ಮತ್ತಾವುದೇ ಕಾರಣದಿಂದಾಗಿಯೋ ಆ ಪರಿಹಾರವನ್ನು ಸ್ವೀಕರಿಸದೆಯೂ ಇರಬಹುದು.

ಆದರೆ, ಈ ಗುಣಮಟ್ಟವೃತ್ತದಲ್ಲಿ ತಾನು ಕಂಡುಕೊಂಡ ಪರಿಹಾರವನ್ನು ಜಾರಿಗೆ ತರುವುದೊಂದೇ ಸಾಧನೆಯಲ್ಲ. ಸುಮಾರು 30ರಿಂದ 50 ಬಾರಿ ಒಟ್ಟಾಗಿ ಸೇರಿ, ವಿಚಾರವಿನಿಮಯ ಮಾಡಿಕೊಂಡ ಪ್ರಕ್ರಿಯೆಯಲ್ಲಿ ಅದರಲ್ಲಿ ಭಾಗವಹಿಸಿದ ಪ್ರತಿ ವ್ಯಕ್ತಿಯೂ ಸ್ವವಿಕಾಸದ ಹಾದಿಯಲ್ಲಿ ಮುನ್ನಡೆದಿರುತ್ತಾನೆನ್ನುವುದು ನಿರ್ವಿವಾದ.

ಇಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ರಚಿಸಿರುವ ಬಹುತೇಕ ಗುಣಮಟ್ಟವೃತ್ತಗಳು ಕಂಡುಕೊಂಡ ಪರಿಹಾರವನ್ನು ಅಲ್ಲಿನ ವ್ಯವಸ್ಥಾಪಕರು ಜಾರಿಗೆ ತಂದಿದ್ದಾರೆಂದು ತಿಳಿಸಬಯಸುತ್ತೇನೆ. ಶಾಲಾವ್ಯವಸ್ಥಾಪಕರೆದುರಿಗೆ ಸಮಸ್ಯಾ ಪರಿಹಾರದ ಮಂಡನೆಯಾದ ಮೇಲೆ ಅದು ಬೇರೆ ಬೇರೆ ಹಂತದಲ್ಲಿ ನಡೆದು ಹಲವಾರು ಗುಣಮಟ್ಟವೃತ್ತಗಳು ತಮ್ಮ ಕಾರ್ಯಸಾಧನೆಯನ್ನು ರಾಷ್ಟ್ರೀಯ ಹಾಗು ಅಂತರರಾಷ್ಟ್ರೀಯ ಮಟ್ಟದಲ್ಲೂ ಪ್ರದರ್ಶಿಸಿರುವ ನಿದರ್ಶನಗಳು ಸಾಕಷ್ಟಿವೆ. ಗುಣಮಟ್ಟ ವೃತ್ತಗಳ ಕಾರ್ಯದಿಂದ ಉತ್ಪಾದನ ಘಟಕಗಳಲ್ಲಿ, ಅಲ್ಲಿನ ಉತ್ಪನ್ನಗಳ ಮೇಲಾದ ಪರಿಣಾಮವು ಕಣ್ಣಿಗೆ ಕಾಣುವುದು ಸುಲಭವಾಗುತ್ತದೆ. ಆದರೆ ಸೇವಾಕ್ಷೇತ್ರವಾದ ಬ್ಯಾಂಕಿನಲ್ಲಿ ಗುಣಮಟ್ಟವೃತ್ತದ ಪ್ರಯೋಜನವನ್ನು ಗುರುತಿಸುವುದು ಕಷ್ಟವಾದರೂ ಕೆಳಗೆ ಕೊಟ್ಟಿರುವ ಹಲವಾರು ಪ್ರಯೋಜನಗಳನ್ನು ಗುರುತಿಸಬಹುದು :

1 ಸಮಸ್ಯೆ ಪರಿಹಾರವಾದ ತೃಪ್ತಿ
2 ಕೆಲಸದಲ್ಲಿ ತೃಪ್ತಿ

3 ಉತ್ತಮಗೊಂಡ ಗ್ರಾಹಕಸೇವೆ
4 ಕಾರ್ಯಕ್ಷೇತ್ರದಲ್ಲಿ ಉತ್ತಮಗೊಂಡ ಪರಿಸರ
5 ವ್ಯಕ್ತಿಗಳ ನಡುವಿನ ಸಂವಹನದ ವೃದ್ಧಿ
6 ವಂಚನೆ ಪ್ರಸಂಗಗಳಲ್ಲಿ ಇಳಿಮುಖ
7 ಸೇವೆಯಲ್ಲಿ ಕ್ಷಿಪ್ರತೆ
8 ಸಮಸ್ಯೆ ಪರಿಹಾರ ಮಾಡುವ ಮನೋಭಾವದ ವೃದ್ಧಿ
9 ನಾಯಕತ್ವಗುಣದ ವೃದ್ಧಿ
10 ಕೆಲಸದಲ್ಲಿ ತಾದಾತ್ಮ್ಯ, ಇತ್ಯಾದಿ.

ಇವುಗಳಲ್ಲಿ ಅತ್ಯಂತ ಪ್ರಮುಖವೆಂದು ನನಗೆ ತೋರುವುದು, ಉದ್ಯೋಗಿಗಳು ಸಾಧಿಸುವ ಕೆಲಸವಲ್ಲಿನ ತಾದಾತ್ಮ್ಯ. ಆದರೆ, ಇವೆಲ್ಲವೂ ಸಾಧಿತವಾಗುವುದು ಅಥವಾ ಗುಣಮಟ್ಟವೃತ್ತದ ರಚನೆ ಹಾಗೂ ಕಾರ್ಯವು ಮಾದರಿ ರೀತಿಯಲ್ಲಿ ನಡೆಯುವುದು ಸುಲಭ ವಾದದ್ದೇನೂ ಅಲ್ಲ. ಬೇರೆ ದೇಶಗಳಿಂದ ಆಮದಾಗಿಸಿಕೊಂಡ ಈ ಪರಿಕಲ್ಪನೆ ನಮ್ಮಲ್ಲಿ ಇನ್ನೂ ತನ್ನ ಬೇರುಗಳನ್ನು ಊರಿಲ್ಲ— ಉದ್ಯೋಗಿಗಳಿಗೆ ಇದರ ಬಗ್ಗೆ ಇರುವ ತಪ್ಪುಕಲ್ಪನೆಗಳಿಂದಾಗಿಯೂ ಇದರ ಕಾರ್ಯವೈಖರಿಯು ಬಹಳ ವೈರುಧ್ಯಗಳಿಂದ ಕೂಡಿರುವು ದರಿಂದಾಗಿಯೂ ಈ ಪರಿಕಲ್ಪನೆಯು ಬ್ಯಾಂಕಿಂಗ್ ವಲಯದಲ್ಲಿ ವ್ಯಾಪಕವಾಗಿ ಹರಡುವುದಕ್ಕೆ ವಿಳಂಬವನ್ನು ತರುತ್ತಲಿದೆ. ಇಲ್ಲಿ ವೈರುಧ್ಯವೆಂದರೆ, ವ್ಯವಸ್ಥಾಪಕರ ಪಾತ್ರದ ವೈರುಧ್ಯಗಳು— ಹೀಗಾಗಿ ಒಟ್ಟಿನಲ್ಲಿ 'ಗುಣಮಟ್ಟವೃತ್ತ'ದ ರಚನೆಗೆ ನಮ್ಮ ನೆಲ ಇನ್ನೂ ಸಿದ್ಧವಾಗಿಲ್ಲವೆಂದು ಹೇಳಬೇಕಾಗುತ್ತದೆ.

ಉತ್ತಮವಾದ ಗುಣಗಳುಳ್ಳ ಗುಣಮಟ್ಟವೃತ್ತದ ಚಾಲನೆಗೆ ಆಗೊಮ್ಮೆ ಈಗೊಮ್ಮೆ ಉನ್ನತಮಟ್ಟದ ವ್ಯವಸ್ಥಾಪನ ವರ್ಗ ದಿಂದ ಪುನಶ್ಚೇತನ ಸಿಗುತ್ತಿದೆಯಾದರೂ, ಬಹುತೇಕ ಉದ್ಯೋಗಿ ಗಳಿಗೆ ಇದನ್ನು ತಮ್ಮದಾಗಿಸಿಕೊಳ್ಳುವ ಪ್ರೇರಣೆ ಸಾಕಷ್ಟು ಪ್ರಮಾಣದಲ್ಲಿ ಒದಗಿಲ್ಲವೆಂದೇ ಹೇಳಬೇಕು.

ಶಾಖಾಮಟ್ಟದಲ್ಲಿ ಮುಖ್ಯಸ್ಥರ ಉದಾಸೀನ ಧೋರಣೆಗಳಿಂದ ಹಾಗೂ ನೌಕರ ಮತ್ತು ಅಧಿಕಾರಿ ಸಂಘಗಳ ನಿರಾಸಕ್ತಿಯಿಂದಾಗಿ ಈ ಆಮದಾದ ತಳಿಗೆ ನೀರೆರೆಯುವ ಕೆಲಸ ನಡೆದಿಲ್ಲ. ಇತ್ತೀಚೆಗೆ ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ನೌಕರ ಸಂಘ ಹಾಗೂ ಅಧಿಕಾರಿ ಗಳ ಸಂಘ ಎರಡನ್ನೂ ಒಳಗೊಂಡು, ಅಲ್ಲಿನ ವ್ಯವಸ್ಥಾಪನ ಮಂಡಳಿ ಗುಣಮಟ್ಟವೃತ್ತದ ಪುನಶ್ಚೇತನಕ್ಕೆ ಮಾಡಿರುವ ಪ್ರಯತ್ನವು ಈ ದಿಸೆಯಲ್ಲಿ ಗಮನಿಸಬೇಕಾದ ಅಂಶವಾಗು ತ್ತದೆ.

ಜಪಾನಿನಲ್ಲಿ ಅಂಕುರಾರ್ಪಣವಾಗಿ ಬೆಳೆದು, ಬೇರೆಲ್ಲೆಡೆ ಹರಡಿ, ಇಲ್ಲಿಯೂ ಬೆಳೆಯಲು ಅವಕಾಶಕ್ಕಾಗಿ ಕಾಯುತ್ತಿರುವ ಈ ವೃತ್ತಕ್ಕೆ ಇನ್ನುಮುಂದಾದರೂ ಒಳ್ಳೆಯ ಭೂಮಿ ಸಿಗಬಹುದೆಂದು ಆಶಿಸುತ್ತೇನೆ. ಸಮರ್ಪಕವಾಗಿ ಮಾಡಿದಲ್ಲಿ ಉದ್ಯೋಗಿಗಳ ಅಸಂತೃಪ್ತಿಯನ್ನು ಹೋಗಲಾಡಿಸಿ, ಕಾರ್ಯದಕ್ಷತೆಯನ್ನು ಹೆಚ್ಚಿಸಿ, ತಮ್ಮ ಕೆಲಸದಲ್ಲಿ ತಾದಾತ್ಮ್ಯವನ್ನು ಕಂಡುಕೊಂಡು ತನ್ಮೂಲಕ ಸ್ವವಿಕಾಸ ಹಾಗೂ ಸಂಸ್ಥೆಯ ಉತ್ಕೃಷ್ಟತೆಯ ವೃದ್ಧಿಗೆ ಸಹಾಯಕವಾಗಬಲ್ಲ ಗುಣಮಟ್ಟವೃತ್ತ ನಿಜಕ್ಕೂ ಪರಿಣಾಮ ಕಾರಿಯಾದುದು. ●

---

# ಬ್ಯಾಂಕ್ ದಾಖಲೆಗಳು ಮತ್ತು ಮುಂಜಾಗ್ರತೆ

[18ನೇ ಪುಟದಿಂದ ಮುಂದುವರಿದದ್ದು]

6 ದಾಖಲೆಗಳು ಅವಧಿ ಮೀರುವ ದಿನಕ್ಕಿಂತಲೂ ಆರು ತಿಂಗಳಿಗೆ ಮುಂಚೆ ದಿನಚರಿಯಲ್ಲಿ ನಮೂದಿಸಿ, ಸೂಕ್ತನಿರ್ದೇಶನ ಬರೆದಿಡಬೇಕು.

7 ದಾಖಲೆಗಳ ಕಾಲಪರಿಮಿತಿ ಅವಧಿಗೆ ಮುಂಚೆ, ಸಾಲ ದೃಢೀ ಕರಣಪತ್ರ ಪಡೆಯುವ ಬಗ್ಗೆ, ಸಾಲಜ್ಞಾಪನಪತ್ರ ಪಡೆಯಲು ವ್ಯವಸ್ಥೆ ಮಾಡಬೇಕು.

8 ದಾಖಲೆ ನೀಡಿದ ವ್ಯಕ್ತಿ ಮೃತಪಟ್ಟಲ್ಲಿ ಅವರ ಸಂಬಂಧಿಕರಿಂದ, ಹಕ್ಕುದಾರರಿಂದ ಸೂಕ್ತ ದಾಖಲೆ ಪಡೆದು ಬ್ಯಾಂಕ್ ಸಾಲ ಹಿಂತಿರುಗಿಸಲು ಒಪ್ಪಿ ನೀಡಿದ ಪತ್ರ ಪಡೆಯುವ ವ್ಯವಸ್ಥೆ ಮಾಡಬೇಕು.

9 ಜಾಮೀನುದಾರರು ಮುಂದೆ ತಕರಾರೇನಾದರೂ ಮಾಡಿದಲ್ಲಿ ಅವರು ತಮ್ಮ ಜಾಮೀನು ರದ್ಧತಿಗೆ ವಿನಂತಿಸಿದಲ್ಲಿ, ಸೂಕ್ತ ಜಾಮೀನು ಬೇರೆಯವರಿಂದ ಪಡೆದು ದಾಖಲೆಗಳ ಜೊತೆ ಸೇರಿಸಬೇಕು.

ಸರಿಯಾದ ಜಾಗರೂಕತೆ ವಹಿಸಿದಲ್ಲಿ ದಾಖಲೆಗಳು ಅಪೂರ್ಣ ವಾಗಿರದೆ, ಅವಧಿ ಮೀರದೆ, ಬ್ಯಾಂಕ್ ನೀಡಿದ ಸಾಲಕ್ಕೆ ಪೂರಕ ವಾಗಿದ್ದು, ಬ್ಯಾಂಕ್ ಹಣದ ಸುರಕ್ಷತೆ ಸಾಧನೆಯಲ್ಲಿ ಸಂಬಂಧ ಪಟ್ಟವರು ಶ್ರಮಿಸಿ, ಕೋರ್ಟಿನಲ್ಲಿ ಸಾಕ್ಷಿಪುರಾವೆಗಳನ್ನು ನಿರ್ಮಿಸು ವಲ್ಲಿ ಪ್ರಮುಖ ಪಾತ್ರ ವಹಿಸಬಲ್ಲವು. ಈ ದಾಖಲೆಗಳನ್ನು ಸರಿ ಯಾದ ರೀತಿಯಲ್ಲಿ ನಿರ್ವಹಿಸಿದರೆ ಸಾಲ ಮರುಪಾವತಿಯ ತೊಂದರೆ ಇರದು. ಕೋರ್ಟಿನಲ್ಲಿ ಆಗುವ ಅನಾವಶ್ಯಕ ವಿಳಂಬ, ತೊಂದರೆ ತಪ್ಪಿಸಬಹುದು. ●

